# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೬, ೨೦೧೪ (ಫಾಲ್ಗುಣ ೧೫, ಶಕ ವರ್ಷ ೧೯೩೫)<br>Bangalore, Thursday, March 6, 2014 (Phalguna 15, Shaka Varsha 1935) | ಸಂಚಿಕೆ ೧೦<br>Issue 10 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಹೆಚ್ಚುವರಿ ಪ್ರೋತ್ಸಾಹಧನ ನೆರವು ಯೋಜನೆ

**ಓದಲಾಗಿದೆ :**

1. ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013
2. ಸರ್ಕಾರದ ಅಧಿಸೂಚನೆ ಸಂಖ್ಯೆ ವಾಕೈ/69/ಎಸ್‌ಜಿಎಫ್/2013, ದಿನಾಂಕ : 03–08–2013
3. ಸರ್ಕಾರದ ಆದೇಶ ಸಂಖ್ಯೆ ವಾಕೈ/69/ಎಸ್‌ಜಿಎಫ್/2013, ದಿನಾಂಕ : 04–09–2013 ಮತ್ತು 22–10–2013
4. ಸರ್ಕಾರದ ಅಧಿಸೂಚನೆ ಸಂಖ್ಯೆ ಎಫ್‌ಡಿ/216/ಸಿಎಸ್‌ಎಲ್/2013, ದಿನಾಂಕ: 05–11–2013
5. ಸರ್ಕಾರದ ಅಧಿಸೂಚನೆ ಸಂಖ್ಯೆ ಎಫ್‌ಡಿ/216/ಸಿಎಸ್‌ಎಲ್/2013, ದಿನಾಂಕ: 22–11–2013
6. ಸದಸ್ಯ ಕಾರ್ಯದರ್ಶಿ, ಕಬ್ಬು ನಿಯಂತ್ರಣ ಮಂಡಳಿ ಹಾಗೂ ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರವರ ಅಧಿಸೂಚನೆ ಸಂಖ್ಯೆ: ಡಿಎಸ್‌ಕೆ/ಎಸ್‌ಟಿಟಿ/51/2013–14, ದಿನಾಂಕ: 23–11–2013 ಮತ್ತು 25–11–2013
7. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 48 ಬಿಆರ್‌ಎಸ್ 2013, ದಿನಾಂಕ: 18–12–2013
8. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಡಿಎಸ್‌ಕೆ/ಎಸ್‌ಟಿಟಿ/2013–14, ದಿನಾಂಕ: 20–12–2013

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಕರ್ನಾಟಕ ರಾಜ್ಯದಲ್ಲಿನ ಸಕ್ಕರೆ ಕಾರ್ಖಾನೆಗಳಲ್ಲಿ ಬಳಕೆಗೆ ಅಗತ್ಯವಾದ ಕಬ್ಬಿನ ಖರೀದಿ ಮತ್ತು ಸರಬರಾಜನ್ನು ನಿಯಂತ್ರಿಸಲು ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಅನುಷಂಗಿಕವಾದ ವಿಷಯಗಳಿಗೆ ಉಪಬಂಧಿಸುವುದು ವಿಹಿತವಾಗಿರುವುದರಿಂದ ರಾಜ್ಯದಲ್ಲಿ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ಅನ್ನು ಜಾರಿಗೆ ತರಲಾಗಿದೆ. ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಕಬ್ಬು ನಿಯಂತ್ರಣ ಮಂಡಳಿ (ವ್ಯವಹಾರ ನಿರ್ವಹಣೆ ಕುರಿತ ಕಾರ್ಯವಿಧಾನ ನಿಯಮಗಳು, 2013 {Karnataka Sugarcane Control Board (Procedure regarding Transaction of Business) Rules, 2013} ಅನ್ನು ಹೊರಡಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ಆದೇಶಗಳಲ್ಲಿ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮದ ಕಂಡಿಕೆ 3(2)ರ ಪ್ರಕಾರ ಕಬ್ಬು ನಿಯಂತ್ರಣ ಮಂಡಳಿಯನ್ನು ರಚಿಸಿ ಆದೇಶಿಸಲಾಗಿದೆ. ಸದರಿ ಮಂಡಳಿಯಲ್ಲಿ ಮಾನ್ಯ ಸಕ್ಕರೆ ಖಾತೆ ಹೊಂದಿರುವ ಸಚಿವರು ಅಧ್ಯಕ್ಷರಾಗಿ, ಕೃಷಿ ಖಾತೆ ಹೊಂದಿರುವ ಸಚಿವರು ಸಹಾಧ್ಯಕ್ಷರಾಗಿ, ಮೂವರು ಅಧಿಕಾರಿ ವರ್ಗದವರು ಸದಸ್ಯರಾಗಿ ಕಬ್ಬು ಬೆಳೆಗಾರರಿಂದ ರಾಜ್ಯ ಸರ್ಕಾರವು ನಾಮ ನಿರ್ದೇಶಿಸಿದ ಐವರಿಗಿಂತ ಹೆಚ್ಚಿಲ್ಲದ ರೈತ ಪ್ರತಿನಿಧಿಗಳು, ಸಕ್ಕರೆ ಕಾರ್ಖಾನೆಗಳನ್ನು ನಡೆಸುತ್ತಿರುವವರಿಂದ ರಾಜ್ಯ ಸರ್ಕಾರವು ನಾಮ ನಿರ್ದೇಶಿಸಿದ ಐವರಿಗಿಂತ ಹೆಚ್ಚಿಲ್ಲದ ಸದಸ್ಯರು ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸದಸ್ಯ–ಕಾರ್ಯದರ್ಶಿಯಾಗಿ ಇರುತ್ತಾರೆ.

ಕಬ್ಬು ನಿಯಂತ್ರಣ ಮಂಡಳಿಯು ದಿನಾಂಕ 28–09–2013, 29–10–2013 ಮತ್ತು 10–11–2013 ರಂದು ಸಭೆಗಳನ್ನು ಸೇರಿದ್ದು, ದಿನಾಂಕ: 10–11–2013ರಂದು ನಡೆದ ಸಭೆಯಲ್ಲಿ ಮಂಡಳಿಯ ಸದಸ್ಯರುಗಳು ನೀಡಿದ ಮಾಹಿತಿ, ಅಭಿಪ್ರಾಯ ಹಾಗೂ ಅಂಕಿ–ಅಂಶಗಳನ್ನು ಪರಿಶೀಲಿಸಿ 2013–14ನೇ ಸಾಲಿಗೆ ಕಬ್ಬು ಬೆಲೆ ನಿಗದಿಪಡಿಸುವ ಬಗ್ಗೆ ಲೆಕ್ಕಾಚಾರ ಮಾಡಿ 2013–14ನೇ ಕಬ್ಬು ನುರಿಸುವ ಹಂಗಾಮಿಗೆ ಪ್ರತಿ ಟನ್ ಕಬ್ಬಿನ ಬೆಲೆ ಈ ಕೆಳಕಂಡಂತೆ ನಿಗದಿಪಡಿಸಿರುತ್ತದೆ :–

1. ದಕ್ಷಿಣ ಕರ್ನಾಟಕದಲ್ಲಿ ಶೇ. 9.5 ಇಳುವರಿಗೆ ಪ್ರತಿ ಟನ್ ಕಬ್ಬಿಗೆ ರೂ. 2424/– ಎಂದು ಲೆಕ್ಕ ಬಂದಿರುವುದರಿಂದ ಎಲ್ಲಾ ತೆರಿಗೆ–ಕರ ರಿಯಾಯಿತಿ ನೀಡಿದಲ್ಲಿ ಪ್ರತಿ ಟನ್ ಕಬ್ಬಿಗೆ ಸರಾಸರಿ ರೂ. 2500/– ದರಕ್ಕೆ ಬರಲಾಗಿದೆ. ದಕ್ಷಿಣ ಕರ್ನಾಟಕದ ಎಲ್ಲಾ ಕಾರ್ಖಾನೆಗಳಿಗೆ ಈ ದರವನ್ನು ಸಮಾನವಾಗಿ ಅಳವಡಿಸುವುದು. ಈ ದರ ಎಕ್ಸ್–ಗೇಟ್ ಇರುತ್ತದೆ.
2. ಉತ್ತರ ಕರ್ನಾಟಕದಲ್ಲಿ ಶೇ. 11ರ ಇಳುವರಿಗೆ ಪ್ರತಿ ಟನ್ ಕಬ್ಬಿಗೆ ರೂ. 2729/– ಎಂದು ಲೆಕ್ಕ ಬಂದಿರುವುದರಿಂದ ಎಲ್ಲಾ ತೆರಿಗೆ–ಕರ ರಿಯಾಯಿತಿ ನೀಡಿದಲ್ಲಿ ಪ್ರತಿ ಟನ್ ಕಬ್ಬಿಗೆ ಸರಾಸರಿ ರೂ. 2825/– ದರಕ್ಕೆ ಬರಲಾಗಿದೆ. ಈ ದರದಲ್ಲಿ ಕಬ್ಬು ಕಟಾವು ಹಾಗೂ ಸಾಗಾಣಿಕೆ ವೆಚ್ಚ ಕಡಿತಗೊಳಿಸಿ ಒಟ್ಟು ರೂ. 2500/–ನ್ನು ಎಕ್ಸ್–ಫೀಲ್ಡ್ ದರದಲ್ಲಿ ರೈತರಿಗೆ ನೀಡುವುದು. ಉತ್ತರ ಕರ್ನಾಟಕದ ಎಲ್ಲಾ ಕಾರ್ಖಾನೆಗಳಿಗೆ ಈ ದರವನ್ನು ಸಮಾನವಾಗಿ ಅಳವಡಿಸುವುದು. ಈ ದರ ಎಕ್ಸ್–ಫೀಲ್ಡ್ ಇರುತ್ತದೆ.

ಅಲ್ಲದೆ, ಕಬ್ಬು ನಿಯಂತ್ರಣ ಮಂಡಳಿಯು ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಎಲ್ಲಾ ತೆರಿಗೆ–ಕರ ರಿಯಾಯಿತಿಗಳನ್ನು ನೀಡಲು ಪರಿಗಣಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತದೆ. ಕಬ್ಬು ನಿಯಂತ್ರಣ ಮಂಡಳಿಯ ನಿರ್ಣಯವನ್ನು ಪರಿಗಣಿಸಿ ಸರ್ಕಾರವು ಮೇಲೆ (3) ಮತ್ತು (4)ರಲ್ಲಿ ಓದಲಾದ ಅಧಿಸೂಚನೆಗಳಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಈ ಕೆಳಕಂಡಂತೆ ಕಬ್ಬು ಖರೀದಿ ತೆರಿಗೆ ಹಾಗೂ ರಸ್ತೆ ಕರ ಮತ್ತು ಮೌಲ್ಯವರ್ಧಿತ ತೆರಿಗೆ ಪಾವತಿಗೆ ಮನ್ನಾ ಮಾಡಿರುತ್ತದೆ.

I. ಅಧಿಸೂಚನೆ ಸಂಖ್ಯೆ ಎಫ್‌ಡಿ/216/ಸಿಎಸ್‌ಎಲ್/2013, ದಿನಾಂಕ: 22–11–2013ರಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ದಿನಾಂಕ: 31–03–2014ರವರೆಗೆ ಕಬ್ಬು ಖರೀದಿ ತೆರಿಗೆ ಹಾಗೂ ರಸ್ತೆ ಕರ ಮೊತ್ತವನ್ನು ಮನ್ನಾ ಮಾಡಲಾಗಿದೆ.

II. ಅಧಿಸೂಚನೆ ಸಂಖ್ಯೆ ಎಫ್‌ಡಿ/216/ಸಿಎಸ್‌ಎಲ್/2013, ದಿನಾಂಕ: 05–11–2013ರಲ್ಲಿ ದಿನಾಂಕ: 06–11–2013ರಿಂದ ಸಕ್ಕರೆ ಮಾರಾಟದ ಮೇಲೆ ಮೌಲ್ಯವರ್ಧಿತ ತೆರಿಗೆಯನ್ನು ಮನ್ನಾ ಮಾಡಲಾಗಿದೆ.

ಕಬ್ಬು ನಿಯಂತ್ರಣ ಮಂಡಳಿಯು ಮೇಲೆ ನಿಗದಿಪಡಿಸಿದಂತೆ ಮಂಡಳಿಯ ಸದಸ್ಯ–ಕಾರ್ಯದರ್ಶಿಯವರು ಮೇಲೆ ಓದಲಾದ (4)ರ ಅನ್ವಯ 2013–14ನೇ ಸಾಲಿಗೆ ಸಂಬಂಧಿಸಿದಂತೆ ದಕ್ಷಿಣ ಕರ್ನಾಟಕ ಭಾಗಕ್ಕೆ ಎಕ್ಸ್–ಗೇಟ್ ಪ್ರತಿ ಟನ್ ಕಬ್ಬಿಗೆ ರೂ. 2500/– ಮತ್ತು ಉತ್ತರ ಕರ್ನಾಟಕ ಭಾಗಕ್ಕೆ ಎಕ್ಸ್–ಫೀಲ್ಡ್ ದರದಲ್ಲಿ ಪ್ರತಿ ಟನ್ ಕಬ್ಬಿಗೆ ರೂ. 2500/– ದರ ನಿಗದಿ ಮಾಡಿ ಅಧಿಸೂಚನೆಯನ್ನು ಹೊರಡಿಸಿರುತ್ತಾರೆ.

ಮೇಲೆ (7)ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯು 2013–14ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2401–00–800–01–40–059 (Plan) – Other Agricultural Schemes" ಅಡಿ ರೂ. 30,000.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ರೈತರಿಗೆ ಕಬ್ಬಿಗೆ ಪ್ರೋತ್ಸಾಹ ಧನವನ್ನಾಗಿ ನೀಡಲು ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರಿಗೆ ಒದಗಿಸಲು ಅವಕಾಶ ಕಲ್ಪಿಸಿದೆ.

ರಾಜ್ಯದ ಕಬ್ಬು ಬೆಳೆಗಾರರು ಹಾಗೂ ವಿವಿಧ ರೈತ ಸಂಘಟನೆಗಳು ಕಬ್ಬು ನಿಯಂತ್ರಣ ಮಂಡಳಿಯು ನಿಗದಿಪಡಿಸಿರುವ ಪ್ರತಿ ಟನ್ ಕಬ್ಬಿನ ಬೆಲೆಯು ಕಡಿಮೆ ಇರುವುದೆಂದು ಹಾಗೂ ಕಬ್ಬಿಗೆ ಇನ್ನೂ ಹೆಚ್ಚಿನ ಬೆಲೆ ನಿಗದಿಪಡಿಸಬೇಕೆಂದು ಒತ್ತಾಯಿಸಿರುತ್ತಾರೆ ಮತ್ತು ಸಕ್ಕರೆ ಕಾರ್ಖಾನೆಗಳು ಮಂಡಳಿ ನಿಗದಿಪಡಿಸಿದ ಬೆಲೆಯನ್ನು ನೀಡಲು ಕಷ್ಟಸಾಧ್ಯವೆಂದು ತಿಳಿಸಿರುತ್ತಾರೆ.

ಮೇಲ್ಕಂಡ ಪರಿಸ್ಥಿತಿಯ ಹಿನ್ನೆಲೆಯಲ್ಲಿ 2013–14ನೇ ಸಾಲಿಗೆ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಬೆಳೆದ ರೈತರು ಸರಬರಾಜು ಮಾಡುವ ಪ್ರತಿ ಟನ್ ಕಬ್ಬಿಗೆ ರೂ. 150/– ನ್ನು ಹೆಚ್ಚುವರಿ ಪ್ರೋತ್ಸಾಹ ಧನವಾಗಿ (additional incentive) ಕರ್ನಾಟಕ ರಾಜ್ಯದ ರೈತರಿಗೆ ನೀಡಲು ಸರ್ಕಾರ ತೀರ್ಮಾನಿಸಿದೆ. ಕರ್ನಾಟಕ ರಾಜ್ಯದಲ್ಲಿ 2013–14ನೇ ಸಾಲಿನಲ್ಲಿ ಸುಮಾರ 300 ಲಕ್ಷ ಟನ್ ಕಬ್ಬು ರೈತರಿಂದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಆಗುವ ಸಾಧ್ಯತೆ ಇದೆ ಎಂದು ಅಂದಾಜಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 288 ಎಸ್‌ಜಿಎಫ್ 2013, ಬೆಂಗಳೂರು, ದಿನಾಂಕ: 07ನೇ ಜನವರಿ, 2014**

2013–14ನೇ ಕಬ್ಬು ನುರಿಸುವ ಹಂಗಾಮಿನಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಬೆಳೆದ ರೈತರು ಸರಬರಾಜು ಮಾಡುವ ಪ್ರತಿ ಟನ್ ಕಬ್ಬಿಗೆ ರೂ. 150/–ನ್ನು ಹೆಚ್ಚುವರಿ ಪ್ರೋತ್ಸಾಹ ಧನವನ್ನಾಗಿ ಕರ್ನಾಟಕ ರಾಜ್ಯದ ರೈತರಿಗೆ ಈ ಕೆಳಗಿನ ಷರತ್ತುಗಳಂತೆ ನೀಡಲು ಮಂಜೂರಾತಿ ನೀಡಿದೆ.

1. ದಿನಾಂಕ: 01–10–2013ರಿಂದ 30–09–2014ರ ಅವಧಿಯಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರಾಜ್ಯದ ರೈತರಿಗೆ ಈ ಹೆಚ್ಚುವರಿ ಪ್ರೋತ್ಸಾಹಧನ ಅನ್ವಯವಾಗುತ್ತದೆ.
2. 2013–14ನೇ ಸಾಲಿನ ಹಂಗಾಮನ್ನು ಸಕ್ಕರೆ ಕಾರ್ಖಾನೆಗಳು ದಿನಾಂಕ: 01–10–2013ಕ್ಕಿಂತ ಮುಂಚಿತವಾಗಿ ಪ್ರಾರಂಭಿಸಿದಲ್ಲಿ 2013–14ನೇ ಸಾಲಿನಲ್ಲಿ ಕಾರ್ಖಾನೆಯನ್ನು ಪ್ರಾರಂಭಿಸಿದ ದಿನಾಂಕದಿಂದ ಸದರಿ ಹಂಗಾಮು ಮುಕ್ತಾಯವಾಗುವವರೆಗಿನ ದಿನಾಂಕದವರೆಗೆ ರೈತರು ಸರಬರಾಜು ಮಾಡಿದ ಕಬ್ಬಿಗೆ ಸಹ ಈ ಹೆಚ್ಚುವರಿ ಪ್ರೋತ್ಸಾಹಧನ ಅನ್ವಯವಾಗಲಿದೆ. 2014–15ನೇ ಸಾಲಿನ ಹಂಗಾಮನ್ನು 01–10–2014ಕ್ಕಿಂತ ಮುಂಚಿತವಾಗಿ ಪ್ರಾರಂಭಿಸುವ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಆಗುವ ಕಬ್ಬಿಗೆ ಈ ಹೆಚ್ಚುವರಿ ಪ್ರೋತ್ಸಾಹಧನ ಅನ್ವಯವಾಗುವುದಿಲ್ಲ.
3. 2013–14ನೇ ಸಾಲಿನ ಹಂಗಾಮಿಗೆ ಸಂಬಂಧಿಸಿದಂತೆ ಕಾರ್ಖಾನೆಗಳಲ್ಲಿ ಕಬ್ಬು ನುರಿಸಿದ ಪ್ರಮಾಣದ ಆಧಾರದ ಮೇಲೆ ಕಬ್ಬು ಬೆಳೆಗಾರರ ರೈತರಿಗೆ ಬಿಡುಗಡೆ ಮಾಡಲೇಬೇಕಾದ ಪ್ರೋತ್ಸಾಹಧನ ಮೊತ್ತವನ್ನು ಲೆಕ್ಕಾಚಾರ ಮಾಡಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸದರಿ ಹೆಚ್ಚುವರಿ ಪ್ರೋತ್ಸಾಹಧನ ಬಿಡುಗಡೆಗಾಗಿ ಕೃಷಿ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

4. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಪ್ರೋತ್ಸಾಹಧನವನ್ನು ಬಿಡುಗಡೆಗಾಗಿ ಕೃಷಿ ಇಲಾಖೆಗೆ ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಗಣಿಸಿ ಕೃಷಿ ಇಲಾಖೆಯು ಹೆಚ್ಚುವರಿ ಪ್ರೋತ್ಸಾಹಧನವನ್ನು ಕಬ್ಬು ಆಯುಕ್ತರಿಗೆ ಬಿಡುಗಡೆ ಮಾಡತಕ್ಕದ್ದು.
5. ರಾಜ್ಯದ ಸಕ್ಕರೆ ಕಾರ್ಖಾನೆಗಳು 2013–14ನೇ ಸಾಲಿನ ಹಂಗಾಮಿನಲ್ಲಿ ತಮ್ಮ ತಮ್ಮ ಕಾರ್ಖಾನೆಗಳಲ್ಲಿ ನುರಿಸಿದ ಕಬ್ಬಿನ ಪ್ರಮಾಣದ ವಿವರ ಹಾಗೂ ಕಬ್ಬು ಸರಬರಾಜು ಮಾಡಿದ ರೈತರ ವಿವರಗಳನ್ನು ಪ್ರತಿ 15 ದಿನಗಳಿಗೊಮ್ಮೆ ಅನುಬಂಧ–1ರಲ್ಲಿನ ನಮೂನೆಯಲ್ಲಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ತಪ್ಪದೇ ಸಲ್ಲಿಸತಕ್ಕದ್ದು.
6. ಕೃಷಿ ಇಲಾಖೆ ಬಿಡುಗಡೆ ಮಾಡಿದ ಸದರಿ ಹೆಚ್ಚುವರಿ ಪ್ರೋತ್ಸಾಹಧನವನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಬೇಕು ಹಾಗೂ ಜಿಲ್ಲಾಧಿಕಾರಿಗಳು ಈ ರೀತಿ ಬಿಡುಗಡೆ ಮಾಡಿದ ಹೆಚ್ಚುವರಿ ಪ್ರೋತ್ಸಾಹಧನವನ್ನು ಅನುಬಂಧ–1ರಲ್ಲಿರುವ ಮಾಹಿತಿಯ ಆಧಾರದ ಮೇಲೆ ಕೂಡಲೇ ಆಯಾ ರೈತರ ವೈಯಕ್ತಿಕ ಬ್ಯಾಂಕ್ ಖಾತೆಗಳಿಗೆ ಜಮೆ ಮಾಡಿ, ರೈತವಾರು ವಿತರಣೆಯಾದ ಮೊತ್ತದ ವಿವರವನ್ನು ಉಪಯುಕ್ತತಾ ಪ್ರಮಾಣ ಪತ್ರದೊಂದಿಗೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.
7. ರೈತರ ವೈಯಕ್ತಿಕ ಬ್ಯಾಂಕ್ ಖಾತೆಗಳಿಗೆ ಹೆಚ್ಚುವರಿ ಪ್ರೋತ್ಸಾಹಧನ ಜಮೆ ಮಾಡಿದ ನಂತರ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಕಾರ್ಖಾನೆವಾರು ಹಾಗೂ ರೈತವಾರು ವಿತರಣೆಯಾದ ಮೊತ್ತದ ವಿವರಗಳನ್ನು ಉಪಯುಕ್ತತಾ ಪ್ರಮಾಣ ಪತ್ರದೊಂದಿಗೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

ಈ ಹೆಚ್ಚುವರಿ ಪ್ರೋತ್ಸಾಹಧನವನ್ನು ಕೃಷಿ ಇಲಾಖೆಯ ಲೆಕ್ಕಶೀರ್ಷಿಕೆ "2401–00–800–01–40–059 (Plan) – Other Agricultural Schemes" ಅಡಿಯಲ್ಲಿ ಅನುದಾನವಾಗಿ ನೀಡಲಾಗಿದ್ದು, ಕೃಷಿ ಇಲಾಖೆಯು ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರಿಂದ ಬೇಡಿಕೆ ಬಂದ ನಂತರ ಸದರಿ ಲೆಕ್ಕಶೀರ್ಷಿಕೆ 2852–08–201–0–07–ಯೋಜನೆ–106 ಸಹಾಯಧನ ಇದಕ್ಕೆ ಭರಣ ಮಾಡತಕ್ಕದ್ದು. ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಸದರಿ ಹೆಚ್ಚುವರಿ ಪ್ರೋತ್ಸಾಹಧನವನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳ ಲೆಕ್ಕಶೀರ್ಷಿಕೆಗೆ ಭರಣ ಮಾಡಿ ರೈತರಿಗೆ ಪಾವತಿಸಲು ಕ್ರಮವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಎಫ್‌ಡಿ 1496 ವೆಚ್ಚ–1/2013, ದಿನಾಂಕ: 18–12–2013ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ದಿನಾಂಕ: 03–01–2014ರಂದು ನಡೆದ ಸಚಿವ ಸಂಪುಟ ಸಭೆಯ ಪ್ರಕರಣ ಸಂಖ್ಯೆ: ಸಿ:880/2013ರಲ್ಲಿನ ನಿರ್ಣಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಆರ್. ನರಸಿಂಹಮೂರ್ತಿ ರಾವ್,**
ಪೀಠಾಧಿಕಾರಿ, (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಅನುಬಂಧ–1**

**ನಮೂನೆ–1**

**ರಾಜ್ಯದ ಸಕ್ಕರೆ ಕಾರ್ಖಾನೆಗಳು 2013–14ನೇ ಸಾಲಿನಲ್ಲಿ ನುರಿಸಿದ ಕಬ್ಬಿನ ಪ್ರಮಾಣದ ವಿವರ ಹಾಗೂ ಕಬ್ಬು ಸರಬರಾಜು ಮಾಡಿದ ರೈತರ ವಿವರಗಳು**

**ಕಾರ್ಖಾನೆಯ ಹೆಸರು:**

| ಕ್ರಮ ಸಂಖ್ಯೆ | ಕಬ್ಬು ಸರಬರಾಜು ಮಾಡಿದ ರೈತನ ಹೆಸರು ಮತ್ತು ವಿಳಾಸ | ರೈತನ ಗುರುತಿನ ಸಂಖ್ಯೆ | ರೈತನ ಬ್ಯಾಂಕ್ ಖಾತೆಯ ವಿವರ (ಖಾತೆ ಸಂಖ್ಯೆ ಮತ್ತು ಬ್ಯಾಂಕಿನ ವಿವರ | **2013–14ನೇ ಕಬ್ಬು ನುರಿಸುವ ಹಂಗಾಮಿನಲ್ಲಿ** ———————— ದಿನಾಂಕದಿಂದ ———————— ದಿನಾಂಕದವರೆಗೆ ಸರಬರಾಜು ಮಾಡಲಾದ ಕಬ್ಬಿನ ಪ್ರಮಾಣ (ಮೆ.ಟನ್‌ಗಳಲ್ಲಿ) |
|---|---|---|---|---|
| 1 | 2 | 3 | 4 | 5 |
| | | | | |
| | | | | |
| | | | | |
| | | | | |
| | | | | |

ವ್ಯವಸ್ಥಾಪಕ ನಿರ್ದೇಶಕರು

PR 63
SC 500

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಿದ್ದಲಿಂಗಪ್ಪ, ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು, ಜಿಲ್ಲಾ ಕಾರಾಗೃಹ, ಹಾಸನ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು

**ಓದಲಾಗಿದೆ :**

1. ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: compt/Uplok/BD-2023/2012/DRE-1, ದಿನಾಂಕ: 17–07–2013
2. ತನಿಖಾಧಿಕಾರಿಯ ವರದಿ ಸಂಖ್ಯೆ: compt/Uplok/MYS-2023/2012/DRE-1, ದಿನಾಂಕ: 10–07–2013
3. ತನಿಖಾ ದಾಖಲೆಗಳಾದ ಪಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗಳ ಸಂಬಂಧಪಟ್ಟ ಕಡತಗಳು

**ಪ್ರಸ್ತಾವನೆ :**

ಹಾಸನ ಜಿಲ್ಲಾ ಉಪಕಾರಾಗೃಹದಲ್ಲಿ ವಿಚಾರಣಾಧೀನ ಬಂಧಿಯಾಗಿದ್ದ ಇಮ್ರಾನ್ ಎಂಬುವವನ್ನು ಅವರ ಸ್ನೇಹಿತ ಪಿರ್ಯಾದಿ ಶ್ರೀ ಜೆ.ಎಸ್. ಖಲಂದರ್‌ರವರು ಭೇಟಿ ಮಾಡಲು ಸದರಿ ಕಾರಾಗೃಹಕ್ಕೆ ದಿನಾಂಕ: 27–07–2010ರಂದು ಸಂಜೆ 4–00 ಗಂಟೆ ಸಮಯದಲ್ಲಿ ಹೋದಾಗ ಅವರನ್ನು ಜೈಲಿನ ಒಳಗಡೆ ಬಿಡಲು ಸದರಿ ಜೈಲಿನ ಸಿಬ್ಬಂದಿಗಳಾದ ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು ಮತ್ತು ಇದೇ ಜೈಲಿನಲ್ಲಿರುವ ವಿಚಾರಣಾಧೀನ ಬಂದಿ ಸಂಖ್ಯೆ: 853 ಆದ ಸುರೇಶ ಎಂಬುವವರು ಒಟ್ಟು ರೂ. 500/– ಲಂಚಕ್ಕಾಗಿ ಒತ್ತಾಯ ಮಾಡಿ ಅದರಂತೆ, ದಿನಾಂಕ: 29–07–2010ರಂದು ಆರೋಪಿತರು ಒಟ್ಟು ರೂ. 500/– ಲಂಚದ ಹಣವನ್ನು ನೆರಳು ಸಾಕ್ಷಿದಾರರಾದ ಮೊಹಮ್ಮದ್ ಜಾಕೀರ್ ಹುಸೇನ್ ರವರ ಸಮಕ್ಷಮ ಸ್ವೀಕರಿಸಿರುತ್ತಾರೆ.

ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು, ಜಿಲ್ಲಾ ಕಾರಾಗೃಹ, ಹಾಸನ ಇವರ ವಿರುದ್ಧ ಗುನ್ನೆ ಸಂಖ್ಯೆ: 11/2011ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಹಾಸನ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಡೆಪ್ಯುಟಿ ರಿಜಿಸ್ಟ್ರಾರ್ ಎನ್‌ಕ್ವೇರೀಸ್–1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 17–07–2013 (ಉಲ್ಲೇಖ–1)ರಡಿ ಕಳುಹಿಸಿಕೊಡುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೆಯ ಕಲಂನ ಅಡಿಯಲ್ಲಿ ಮಂಜುರಾತಿಗಾಗಿ ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಡೆಪ್ಯುಟಿ ರಿಜಿಸ್ಟ್ರಾರ್ ಎನ್‌ಕ್ವೇರೀಸ್–1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ : compt/Uplok/BD-2023/2012/DRE-1, ದಿನಾಂಕ: 17–07–2013 ದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(ಅ) ಶ್ರೀ ಖಲಂದರ್ ಜೆ. ಎಸ್. ಬಿನ್ ಬಿ.ಪಿ. ಸುಲೈಮಾನ್, 26 ವರ್ಷ, ಮನೆ ಸಂಖ್ಯೆ: 786, ಕಲ್ಯಾಡಿ ಸಾಬ್ ವಠಾರ, ಪೆನ್‌ಷನ್ ಮೊಹಲ್ಲಾ, ಹಾಸನ ಸಿಟಿ ರವರ ಫಿರ್ಯಾದಿ ದಿನಾಂಕ: 29–07–2010

(ಆ) ಪ್ರಥಮ ವರ್ತಮಾನ ವರದಿ ಹಾಸನ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 13/2010

(ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ: 29–07–2010

(ಈ) ಟ್ರ್ಯಾಪ್ ಮಹಜರ್ ದಿನಾಂಕ: 29–07–2010

(ಉ) ಕೃತ್ಯ ನಡೆದ ಸ್ಥಳದ ನಕಾಶೆ:

(ಊ) ಸಾಕ್ಷಿಗಳ ಹೇಳಿಕೆಗಳು

1) ಶ್ರೀ ಹೆಚ್.ಎನ್. ಮೊಹಮ್ಮದ್ ನಜೀಮ್ ಉಲ್ಲಾ ಬಿನ್ ಲೇಟ್ ಮೊಹಮ್ಮದ್ ನಸ್ರುಲ್ಲಾ

2) ಶ್ರೀ ಮೊಹಮ್ಮದ್ ಜಾಕೀರ್ ಹುಸೇನ್ ಬಿನ್ ಲೇಟ್ ಅಬ್ದುಲ್ ಅಹಮ್ಮದ್ ಖಾನ್

(ಋ) ಆಪಾದಿತರ ಸಮಜಾಯಿಸಿ ಹೇಳಿಕೆಗಳು

1. ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್
2. ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್
3. ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು
4. ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು

ತನಿಖಾಧಿಕಾರಿಗಳಾದ ಶ್ರೀ ಪಿ.ಎಲ್. ರುದ್ರಮುನಿ, ಪೊಲೀಸ್ ಇನ್‌ಸ್ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಹಾಸನ ಇವರು ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು, ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಹಾಸನ ಅರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ: 11/2011ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು, ಶ್ರೀ ಖಲಂದರ್ ಜೆ. ಎಸ್. ಬಿನ್ ಬಿ.ಪಿ. ಸುಲೈಮಾನ್, 26 ವರ್ಷ, ಮನೆ ಸಂಖ್ಯೆ: 786, ಕಲ್ಯಾಡಿ ಸಾಬ್ ವಠಾರ, ಪೆನ್‌ಷನ್ ಮೊಹಲ್ಲಾ, ಹಾಸನ ಸಿಟಿ ಇವರ ಸ್ನೇಹಿತನಾದ ವಿಚಾರಣಾಧೀನ ಬಂದಿ ಇಮ್ರಾನ್ ಎಂಬುವವರನ್ನು ಭೇಟಿ ಮಾಡಲು ಒಟ್ಟು ರೂ. 500/– ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ನೌಕರರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 29–07–2010ರಂದು ಹಾಸನ ಜಿಲ್ಲಾ ಬಂಧೀಖಾನೆಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು ಅಕ್ರಮ ಸಂಭಾವನೆ ಒಟ್ಟು ರೂ. 500/– ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ನೌಕರರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ಹಿಪ್ ಪ್ಯಾಕೇಟ್, ಪ್ಯಾಂಟಿನ ಬಲಭಾಗದ ಜೇಬು, ರವಿಕೆಯ ಎಡಭಾಗವನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳುಸಾಕ್ಷಿಯ ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯನ್ನು ರೂ. 500/–ಗಳನ್ನು ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು, ಇವರಿಂದ ಹಾಸನ ಜಿಲ್ಲಾ ಉಪಕಾರಾಗೃಹದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾದವನ್ನು ಎಸಗಿರುವುದು ಮೇಲ್ನೋಟಕ್ಕೆ ನನಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ, ಇವರನ್ನು ಲಂಚನಿರೋಧಕ ಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಸಿ) ಅಡಿ ಆಪಾದಿತ ನೌಕರರಾದ ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರುರವರನ್ನು ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಗಾಗಿ ನೀಡುವ ಅಧಿಕಾರವನ್ನು ಹೊಂದಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 148 ಪಿಆರ್‌ಇ 2013, ಬೆಂಗಳೂರು, ದಿನಾಂಕ: 01ನೇ ಅಕ್ಟೋಬರ್, 2013**

ಆರೋಪಿಗಳಾದ ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಹೆಡ್‌ವಾರ್ಡರ್, ಶ್ರೀಮತಿ ಶೋಭಾ ಆರ್. ಚೀಫ್ ವಾರ್ಡರ್, ಶ್ರೀ ನಲ್ಲಪ್ಪ ರೆಡ್ಡಿ ಎಸ್. ಜೈಲರ್ ಮತ್ತು ಶ್ರೀ ಬಾನುಪ್ರಕಾಶ್ ಹೆಚ್.ಆರ್. ವಾಹನ ಸ್ವಚ್ಛಕರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಸಿದ್ದಲಿಂಗಪ್ಪ ಸಿ.ಜಿ. ಬಿನ್ ಲೇಟ್ ಗೋವಿಂದೇಗೌಡ ಹೆಡ್‌ವಾರ್ಡರ್, ಮಾತೃಶ್ರೀ ಆಸ್ಪತ್ರೆ ಹಿಂಭಾಗ, ವಿಶ್ವೇಶ್ವರಯ್ಯ ರಸ್ತೆ, ಸಾಲಗಾಮೆ ರಸ್ತೆ, ಹಾಸನ, ಶ್ರೀಮತಿ ಆರ್. ಶೋಭಾ ಕೋಂ ಬಿ. ರವೀಂದ್ರ, ಚೀಫ್ ವಾರ್ಡರ್, ಕಾರಾಗೃಹ ವಸತಿ ನಿಲಯ, ಹಾಸನ, ಶ್ರೀ ಎಸ್. ನಲ್ಲಪ್ಪ ರೆಡ್ಡಿ ಬಿನ್ ಲೇಟ್ ಸಿದ್ದರೆಡ್ಡಿ, ಜೈಲರ್ ಕಾರಾಗೃಹ ವಸತಿ ನಿಲಯ, ಹಾಸನ, ಮತ್ತು ಶ್ರೀ ಹೆಚ್.ಆರ್. ಬಾನುಪ್ರಕಾಶ್ ಬಿನ್ ಲೇಟ್ ರಂಗರಾಜು, ವಾಹನ ಸ್ವಚ್ಛಕರು, ಕಾರಾಗೃಹ ವಸತಿ ನಿಲಯ, ಹಾಸನ ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಾಮವಳಿ 1977ರ ನಿಯಮ 19(1)ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 01–10–2013ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ಜೋಗೋಜಿ,**

PR 89

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಆನಾಸ 19 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ: 09ನೇ ಜನವರಿ 2014**

2013–14ನೇ ಮುಂಗಾರು ಋತುವಿಗೆ ಲೆವಿ ಅಕ್ಕಿಯ ಸಂಗ್ರಹಣಾ ಗುರಿಯನ್ನು 5 ಲಕ್ಷ ಮೆ.ಟನ್‌ನಿಂದ 2.5 ಲಕ್ಷ ಮೆ.ಟನ್‌ಗೆ ಕಡಿಮೆಗೊಳಿಸುವ ಬಗ್ಗೆ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಆನಾಸ 19 ಆರ್‌ಪಿಆರ್ 2013, ದಿನಾಂಕ: 08–01–2014ರ ಆದೇಶ ಭಾಗದಲ್ಲಿ **"ಈ ಆದೇಶವು 2013–14ನೇ ಸಾಲಿನ ಮುಂಗಾರು ಋತುವಿಗೆ (Khariff Marketing Season) ಮಾತ್ರ ಅನ್ವಯಿಸುತ್ತದೆ"** ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್,**

PR 98

ಸರ್ಕಾರದ ಉಪ ಕಾರ್ಯದರ್ಶಿ,

SC 200

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2013–14ನೇ ಮುಂಗಾರು ಋತುನಿನ ಅವಧಿಗೆ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಮೆಕ್ಕೆಜೋಳ ದಾಸ್ತಾನಿಗೆ ಮಿತಿಯನ್ನು ನಿಗಧಿಪಡಿಸುವ ಬಗ್ಗೆ

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 4(1)/2013, Py.-I, ದಿನಾಂಕ: 11–07–2013
2. ಸರ್ಕಾರದ ಆದೇಶ ಸಂಖ್ಯೆ: ಆನಾಸ 13 ಆರ್‌ಪಿಆರ್ 2013, ದಿನಾಂಕ: 22–10–2013
3. ಸರ್ಕಾರದ ಆದೇಶ ಸಂಖ್ಯೆ: ಆನಾಸ 13 ಆರ್‌ಪಿಆರ್ 2013, ದಿನಾಂಕ: 13–11–2013
4. ಮಾರ್ಪಾಡು ಆದೇಶ ಸಂಖ್ಯೆ: ಆನಾಸ 13 ಆರ್‌ಪಿಆರ್ 2013, ದಿನಾಂಕ: 27–11–2013

**ಪ್ರಸ್ತಾವನೆ:**

ಮೇಲೆ ಓದಲಾದ (4)ರ ಸರ್ಕಾರದ ಮಾರ್ಪಾಡು ಆದೇಶದಲ್ಲಿ 2013–14ನೇ ಮುಂಗಾರು ಋತುವಿನಲ್ಲಿ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಲಾಗುತ್ತಿರುವ ಮೆಕ್ಕೆಜೋಳದ ದಾಸ್ತಾನು ಮಿತಿಯನ್ನು ಯಾವುದೇ ಪ್ರಮಾಣಕ್ಕೆ ಸೀಮಿತಗೊಳಿಸದೇ ಖರೀದಿಸುವಂತೆ ಆದೇಶಿಸಲಾಗುತ್ತಿತ್ತು.

ಆದರೆ, ರಾಜ್ಯಾದ್ಯಂತ ಮೆಕ್ಕೆಜೋಳದ ಆವಕವು ಹೆಚ್ಚಾಗುತ್ತಿದ್ದು, ಇದರಿಂದ ಶೇಖರಣೆ ಮಾಡಲು ಗೋದಾಮುಗಳಲ್ಲಿ ಸ್ಥಳಾವಕಾಶದ ತೊಂದರೆಯಿರುವುದರಿಂದ ಇನ್ನು ಮುಂದೆ ರೈತರಿಂದ ಖರೀದಿಸಲಾಗುವ ಮೆಕ್ಕೆಜೋಳದ ಪ್ರಮಾಣದ ಮಿತಿಯನ್ನು ಗರಿಷ್ಠ 75 ಕ್ವಿಂಟಾಲ್‌ಗೆ ನಿಗಧಿಪಡಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 13 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ: 16ನೇ ಜನವರಿ 2014**

ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಇನ್ನು ಮುಂದೆ ಖರೀದಿಸಲಾಗುವ ಮೆಕ್ಕೆಜೋಳದ ಪ್ರಮಾಣದ ಮಿತಿಯನ್ನು ಗರಿಷ್ಠ 75 ಕ್ವಿಂಟಾಲ್‌ಗೆ ನಿಗಧಿಪಡಿಸಲಾಗಿದೆ.

2013–14ನೇ ಮುಂಗಾರು ಅವಧಿಯು ಪೂರ್ಣಗೊಂಡ ನಂತರ ರೈತರಿಂದ ಖರೀದಿಸಿರುವ ಮೆಕ್ಕೆಜೋಳದ ದಾಸ್ತಾನನ್ನು ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮವು ಇ-ಟೆಂಡರ್ ಮೂಲಕ ಹರಾಜು ಮಾಡಲು ಸರ್ಕಾರವು ಆದೇಶಿಸಿದೆ.

ಇನ್ನುಳಿದಂತೆ, ಮೇಲೆ ಓದಲಾದ ಸರ್ಕಾರದ ಆದೇಶಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

**PR 104**
**SC 200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಖಜಾನೆ–2) ಹಾಗೂ ಪದನಿಮಿತ್ತ ಆಯುಕ್ತರು ಖಜಾನೆ, ಹುದ್ದೆಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :** ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಎಫ್‌ಡಿ/ಪಿಎಸ್/24117/2013

**ಪ್ರಸ್ತಾವನೆ:**

ಆರ್ಥಿಕ ಇಲಾಖೆಯು ರಾಜ್ಯಾದ್ಯಂತ ಖಜಾನೆ–2, ಇಂಟಿಗ್ರೇಟೆಡ್ ಫೈನಾನ್ಸಿಯಲ್ ಮ್ಯಾನೇಜಮೆಂಟ್ ಸಿಸ್ಟಮ್ ಈ ಯೋಜನೆಯನ್ನು ಅಳವಡಿಸಲು ಯೋಜಿಸಲಾಗಿದೆ. ಸದರಿ ಯೋಜನೆಯು 2004ರಲ್ಲಿ ಪೂರ್ಣಗೊಂಡಿರುವ ಖಜಾನೆ ಯೋಜನೆಯು ನಂತರದ ಅವತರಣಿಕೆಯಾಗಿದ್ದು, ಖಜಾನೆ ಇಲಾಖೆಯ ಆಂತರಿಕ ಕಾರ್ಯಾಚರಣೆಗಳನ್ನು ಗಣಕೀಕರಣಗೊಳಿಸುವ ಯೋಜನೆಗೆ ಮಾತ್ರ ಸೀಮಿತವಾಗಿತ್ತು. ಆದರೆ, ಖಜಾನೆ–2 ಯೋಜನೆಯು ರಾಜ್ಯದ ಎಲ್ಲಾ ಇಲಾಖೆಗಳ ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಂತೆ ಉದಾಹರಣೆಗೆ ಕರ್ನಾಟಕ ಸರ್ಕಾರದ ಸಚಿವಾಲಯದಿಂದ ಪ್ರಾರಂಭಿಸಿ ಅತ್ಯಂತ ಕಡಿಮೆ ಖರ್ಚು ಇರುವ ರಾಜ್ಯದ ಯಾವುದೇ ಕಛೇರಿಯನ್ನು ಸಹ ಇ-ವೇದಿಕೆ (ಇ–ಪ್ಲಾಟ್‌ಫಾರ್ಮ್) ಅಡಿ ತರುವ ನಿಟ್ಟಿನಲ್ಲಿ ಜಾರಿಗೊಳಿಸಲು ರೂಪಿಸಲಾಗುತ್ತಿದೆ.

ಖಜಾನೆ ಯೋಜನೆಯು 2004ರಲ್ಲಿ ಪೂರ್ಣಗೊಂಡಾಗ ರಾಷ್ಟ್ರದಲ್ಲಿಯೇ ಕರ್ನಾಟಕ ರಾಜ್ಯವು ಖಜಾನೆ ಇಲಾಖೆಯನ್ನು ಗಣಕೀಕರಣಗೊಳಿಸಿದ ಮೊದಲ ರಾಜ್ಯವಾಗಿತ್ತು. ಖಜಾನೆ–2 ಯೋಜನೆಯು ಅತ್ಯಂತ ಮಹತ್ವಾಕಾಂಕ್ಷೀಯ ಉದ್ದೇಶಗಳನ್ನು ಹೊಂದಿದ್ದು, ರಾಷ್ಟ್ರದಲ್ಲಿಯೇ ಇಂತಹ ಯೋಜನೆಯನ್ನು ಜಾರಿಗೆ ತರುವ ಮೊದಲ ರಾಜ್ಯ ಕರ್ನಾಟಕವಾಗಲಿದೆ. ಖಜಾನೆ–2 ಯೋಜನೆಯಲ್ಲಿ ಇ–ಸ್ವೀಕೃತಿ, ಇ–ಬಟವಾಡೆ ಹಾಗೂ ಲೆಕ್ಕಪತ್ರ ನಿರ್ವಹಣೆಗಳನ್ನು ಒಳಗೊಂಡಿದ್ದು, ಭಾರತೀಯ ರಿಸರ್ವ್ ಬ್ಯಾಂಕ್ ಹಾಗೂ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ರವರು ಈ ಯೋಜನೆಯನ್ನು ಪರಿಗಣಿಸಿದ್ದಾರೆ. ಇದೇ ಮಾದರಿಯನ್ನು ಇಡೀ ರಾಷ್ಟ್ರದಲ್ಲಿ ಅಳವಡಿಸಿಕೊಳ್ಳುವ ಅಗತ್ಯವಿದೆ ಎಂದು ಅಭಿಪ್ರಾಯ ನೀಡಿದ್ದಾರೆ. ಖಜಾನೆ–2 ಯೋಜನೆಯು ರಾಜ್ಯದ ಆರ್ಥಿಕ ಚಟುವಟಿಕೆಗಳನ್ನು ರೂಪಾಂತರಗೊಳಿಸುವ ಸಾಮರ್ಥ್ಯ ಹೊಂದಿದೆ. ಆರ್ಥಿಕ ಇಲಾಖೆಯು ಖಜಾನೆ–2 ಯೋಜನೆಯನ್ನು ಜೂನ್ 2014ರಿಂದ ಪ್ರಾರಂಭಿಸಿ ಸೆಪ್ಟೆಂಬರ್ 2014ರಲ್ಲಿ ಜಾರಿಗೆ ತರುವ ಗುರಿ ಹೊಂದಿದೆ.

ಆರ್ಥಿಕ ಇಲಾಖೆಯಲ್ಲಿ ಈ ಯೋಜನೆಯ ಮೇಲ್ವಿಚಾರಣೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಖಜಾನೆ-2) ರವರು ಹೊಂದಿರುತ್ತಾರೆ. ಸದರಿ ಹುದ್ದೆಯ ಹೆಚ್ಚುವರಿ ಪ್ರಭಾರವನ್ನು ಆಯುಕ್ತರು (ವಾಣಿಜ್ಯ ತೆರಿಗೆ)ರವರಿಗೆ ವಹಿಸಲಾಗಿದೆ. ಆದರೆ, ಅವರು ವಾಣಿಜ್ಯ ತೆರಿಗೆಗಳ ಸಂಗ್ರಹಣೆ ಕುರಿತಂತೆ ಹೆಚ್ಚಿನ ಕಾಲಾವಧಿಯನ್ನು ಮೀಸಲಿಡಬೇಕಾದ ಅಗತ್ಯವಿದೆ. ಅಲ್ಲದೇ, ಖಜಾನೆ-2 ಯೋಜನೆ ದೊಡ್ಡ ಪ್ರಮಾಣದ ಸಂಕೀರ್ಣ ಯೋಜನೆಯಾಗಿರುವುದರಿಂದ, ಸದರಿ ಯೋಜನೆಯನ್ನು ಜಾರಿಗೆ ತರುವ ಪೂರ್ಣ ಜವಾಬ್ದಾರಿ ನಿರ್ವಹಿಸುವ ಉದ್ದೇಶಕ್ಕಾಗಿ ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಖಜಾನೆ-2) ಹಾಗೂ ಪದನಿಮಿತ್ತ ಆಯುಕ್ತರು ಖಜಾನೆ ಹುದ್ದೆಯನ್ನು ಸೃಜಿಸುವಂತೆ ಆರ್ಥಿಕ ಇಲಾಖೆಯು ಕೋರಿದೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 1015 ಸೇಇನಿ 2013, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಖಜಾನೆ-2 ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿ ಜಾರಿಗೆ ತರುವ ಪೂರ್ಣ ಜವಾಬ್ದಾರಿ ನಿರ್ವಹಿಸುವ ಉದ್ದೇಶಕ್ಕಾಗಿ ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಖಜಾನೆ-2) ಹಾಗೂ ಪದನಿಮಿತ್ತ ಆಯುಕ್ತರು, ಖಜಾನೆ, ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

**PR 106**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಲೋಕಸೇವಾ ಆಯೋಗದ ವಿಷಯಗಳನ್ನು ನಿರ್ವಹಿಸಲು ಸಿಆಸುಇ (ಸೇವೆಗಳು) ವಿಭಾಗದಡಿ ಸೃಜಿಸಿರುವ ಅಧೀನ ಕಾರ್ಯದರ್ಶಿ ಹುದ್ದೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 130 ಸೇನೆನಿ 2013, ದಿನಾಂಕ: 23-09-2013
2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-1), ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 130 ಸೇನೆನಿ 2013, ದಿನಾಂಕ: 23-09-2013
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 762 ಸಅಸೇ 2013, ದಿನಾಂಕ: 17-10-2013

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ. ಸದರಿ ವಿಭಾಗದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ವಿಷಯಗಳನ್ನು ನಿರ್ವಹಿಸಲು ಮೇಲ್ಕಾಣಿಸಿದ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವ ಅಗತ್ಯವಿದ್ದು ಅದರಂತೆ ಆರ್ಥಿಕ ಇಲಾಖೆಗೆ ಈ ಬಗ್ಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಶಾಖಾಧಿಕಾರಿ | 02 |
| 2. | ಹಿರಿಯ ಸಹಾಯಕ | 02 |
| 3. | ಸಹಾಯಕ | 04 |
| 4. | ಶೀಘ್ರಲಿಪಿಗಾರ | 01 |
| 5. | ಕಿರಿಯ ಸಹಾಯಕ | 02 |
| 6. | ಬೆರಳಚ್ಚುಗಾರರು | 02 |
| 7. | ದಲಾಯತ್ | 02 |
| **ಒಟ್ಟು** | | **15** |

ಪ್ರಸ್ತಾವನೆಯನ್ನು ಪರಿಶೀಲಿಸಿದ ಆರ್ಥಿಕ ಇಲಾಖೆಯು ಒಟ್ಟು 07 ಹುದ್ದೆಗಳನ್ನು ಸೃಜಿಸಲು ಸಹಮತಿ ನೀಡಿರುತ್ತದೆ. ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 762 ಸಅಸೇ 2013, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2013**

ಕರ್ನಾಟಕ ಲೋಕಸೇವಾ ಆಯೋಗದ ವಿಷಯಗಳನ್ನು ನಿರ್ವಹಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು) ವಿಭಾಗದಡಿ ಸೃಜಿಸಲಾದ ಒಂದು ಅಧೀನ ಕಾರ್ಯದರ್ಶಿ ಹುದ್ದೆಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಶಾಖಾಧಿಕಾರಿ | 01 |
| 2. | ಹಿರಿಯ ಸಹಾಯಕ | 01 |
| 3. | ಸಹಾಯಕ | 01 |
| 4. | ಶೀಘ್ರಲಿಪಿಗಾರ | 01 |
| 5. | ಕಿರಿಯ ಸಹಾಯಕ | 01 |
| 6. | ಬೆರಳಚ್ಚುಗಾರರು | 01 |
| 7. | ದಲಾಯತ್ | 01 |
| **ಒಟ್ಟು** | | **7** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 955 ವೆಚ್ಚ–12/2013, ದಿನಾಂಕ: 20–12–2013ರಲ್ಲಿ ನೀಡಲಾದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ,**

PR 107

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ತಿದ್ದುಪಡಿ/ಸೇರ್ಪಡೆ ಆದೇಶ

### ಸಂಖ್ಯೆ: ಬಿಸಿಡಬ್ಲ್ಯು 516 ಬಿಎಂಎಸ್ 2013, ಬೆಂಗಳೂರು, ದಿನಾಂಕ: 06ನೇ ಡಿಸೆಂಬರ್ 2013

ಸರ್ಕಾರದ ಆದೇಶ ಸಂಖ್ಯೆ ಬಿಸಿಡಬ್ಲ್ಯು 516 ಬಿಎಂಎಸ್ 2013, ದಿನಾಂಕ: 12–11–2013ರ ವಿಷಯದ ನಾಲ್ಕನೇ ಸಾಲನ್ನು ಈ ಕೆಳಕಂಡಂತೆ ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

**1. "ಅನುಷ್ಠಾನಗೊಳಿಸಲು ಶೇಕಡ 2ರಷ್ಟು ಆಡಳಿತಾತ್ಮಕ ವೆಚ್ಚವನ್ನು ಭರಿಸಲು ಅನುಮತಿ ನೀಡುವ ಬಗ್ಗೆ"**

ಹಾಗೂ, ಇದೇ ಆದೇಶದಲ್ಲಿನ ಆದೇಶದ ಭಾಗದ 5ನೇ ಸಾಲಿನಿಂದ 8ನೇ ಸಾಲಿನವರೆಗೆ ಇರುವ "ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ನೊಂದಾಯಿಸಿಕೊಳ್ಳುವ ಸಂಬಂಧ ಸಿಬ್ಬಂದಿ ಹಾಗೂ ಮೂಲಭೂತ ಸೌಕರ್ಯದ ಕೊರತೆಯನ್ನು ನೀಗಿಸುವ ಹಿತ ದೃಷ್ಟಿಯಿಂದ ರಾಜ್ಯ ಸರ್ಕಾರದಿಂದ ಕೇಂದ್ರ ಕಛೇರಿ ಹಾಗೂ 177 ತಾಲ್ಲೂಕುಗಳಿಗೆ ಅನುಷ್ಠಾನಕ್ಕಾಗಿ ಬೇಕಾಗುವ ರೂ. 1419.06 ಲಕ್ಷಗಳಿಗೆ ಶೇ. 2ರಷ್ಟು ಅಂದರೆ ರೂ. 28.38 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ" ಎಂಬುದರ ಬದಲಾಗಿ, ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

**2. ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಸಂಬಂಧ ಸಿಬ್ಬಂದಿ ಹಾಗೂ ಮೂಲಭೂತ ಸೌಕರ್ಯ, ಪತ್ರಿಕಾ ಮತ್ತು ಎಲೆಕ್ಟ್ರಾನಿಕ್ ಮಾಧ್ಯಮಗಳ ಪ್ರಕಟಣಾ ವೆಚ್ಚ ಹಾಗೂ ಆಡಳಿತಾತ್ಮಕ ವೆಚ್ಚಗಳನ್ನು ಭರಿಸುವ ಹಿತದೃಷ್ಟಿಯಿಂದ ರಾಜ್ಯ ಸರ್ಕಾರದಿಂದ ಕೇಂದ್ರ ಕಛೇರಿ ಹಾಗೂ 177 ತಾಲ್ಲೂಕುಗಳಿಗೆ ಅನುಷ್ಠಾನಕ್ಕಾಗಿ ಬೇಕಾಗುವ ಕಮಿಟೆಡ್ ಲಯಾಬಿಲಿಟಿ ಮೊತ್ತ ರೂ. 1419.06 ಲಕ್ಷಗಳ ಪೈಕಿ ಶೇ. 2ರಷ್ಟು ಅಂದರೆ ರೂ. 28.38 ಲಕ್ಷಗಳನ್ನು ಭರಿಸಲು ಮಂಜೂರಾತಿ ನೀಡಿ ಆದೇಶಿಸಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ,**

PR 108
SC 100

ಸರ್ಕಾರದ ಉಪ ಕಾರ್ಯದರ್ಶಿ,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾಕ್ಕೆ 2013–14ನೇ ಸಾಲಿನ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 20 ಹೈಕಮಂ 2013, ದಿನಾಂಕ: 11–06–2013

2. ಸರ್ಕಾರಿ ಆದೇಶ ಸಂಖ್ಯೆ: ಯೋಇ 20 ಹೈಕಮಂ 2013, ದಿನಾಂಕ: 31–10–2013

3. ಸರ್ಕಾರಿ ಆದೇಶ ಸಂಖ್ಯೆ: ಯೋಇ 20 ಹೈಕಮಂ 2013, ದಿನಾಂಕ: 12–11–2013

**ಪ್ರಸ್ತಾವನೆ:**

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ, 2013–14ನೇ ಸಾಲಿಗೆ ರೂ. 6530.00 ಲಕ್ಷಗಳಿಗೆ ನಿಗದಿ ಪಡಿಸಿರುತ್ತದೆ. ಅದರ ವಿವರಗಳು ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 2515–00–103–0–01–101 (ಸಹಾಯಾನುದಾನ) | 130.00 |
| 2. | 2515–00–103–0–01–132 (ಬಂಡವಾಳ ವೆಚ್ಚ) | 3655.00 |
| 3. | 2515–00–103–0–01–422 (ವಿಶೇಷ ಘಟಕ ಯೋಜನೆ) | 2008.00 |
| 4. | 2515–00–103–0–01–423 (ಗಿರಿಜನ ಉಪಯೋಜನೆ) | 737.00 |
| | **ಒಟ್ಟು** | **6530.00** |

ಓದಲಾದ (1) ಆದೇಶದಲ್ಲಿ ಮೊದಲನೇ ಕಂತಿನ ಮೊತ್ತವಾಗಿ ರೂ. 1700.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದ್ದು, ಓದಲಾದ (2)ರ ಆದೇಶದಲ್ಲಿ ಲೆಕ್ಕಶೀರ್ಷಿಕೆ 2515–00–103–0–01–10 (ಸಹಾಯಾನುದಾನ)ರಡಿ 2ನೇ ಕಂತಿನ ಮೊತ್ತವಾಗಿ ರೂ. 32.50 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ ಹಾಗೂ ಓದಲಾದ (3)ರ ಆದೇಶದಲ್ಲಿ ಇತರೆ ಮೂರು ಲೆಕ್ಕಶೀರ್ಷಿಕೆಗಳ 2ನೇ ಕಂತಿನ ಬಾಕಿ ಮೊತ್ತ ರೂ. 1532.50 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಲಾಗಿದ್ದು, ಈವರೆಗೆ ಒಟ್ಟು ರೂ. 3265.00ರಷ್ಟು ಅನುದಾನವನ್ನು ಬಿಡುಗಡೆಗೊಳಿಸಲಾಗಿದ್ದು, ಪ್ರಸ್ತುತ ಮೂರನೇ ಕಂತಿನ ಅನುದಾನ ಬಿಡುಗಡೆಗೊಳಿಸಲು ಉದ್ದೇಶಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 20 ಹೈಕಮಂ 2013, ಬೆಂಗಳೂರು, ದಿನಾಂಕ: 10ನೇ ಜನವರಿ 2014**

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾಕ್ಕೆ 2013–14ನೇ ಸಾಲಿನ ಮೂರನೇ ಕಂತಿನ ಅನುದಾನವಾಗಿ ರೂ. 1632/.50 ಲಕ್ಷ (ಹದಿನಾರು ಕೋಟಿ ಮೂವತ್ತೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿದೆ.

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 2515–00–103–0–01–101 (ಸಹಾಯಾನುದಾನ) | 32.50 |
| 2. | 2515–00–103–0–01–132 (ಬಂಡವಾಳ ವೆಚ್ಚ) | 913.75 |
| 3. | 2515–00–103–0–01–422 (ವಿಶೇಷ ಘಟಕ ಯೋಜನೆ) | 502.00 |
| 4. | 2515–00–103–0–01–423 (ಗಿರಿಜನ ಉಪಯೋಜನೆ) | 184.25 |
| | **ಒಟ್ಟು** | **1632.50** |

ಬಿಡುಗಡೆಯಾದ ಈ ಅನುದಾನವನ್ನು ಉಪಯೋಗಿಸಿಕೊಂಡು ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಸೆಳೆಯುವ, ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಗೆ ಸಹಿ ಮಾಡಿರುವ ಸರ್ಕಾರದ ಅಧೀನ ಕಾರ್ಯದರ್ಶಿ 1 & 2, ಯೋಜನೆ ಕಾರ್ಯಕ್ರಮವನ್ನು ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಮತ್ತು ಮೇಲುರುಜು ಮಾಡುವ ಅಧಿಕಾರವನ್ನು ನಿರ್ದೇಶಕರು, ಎಡಿಬಿ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಪ್ರತ್ಯಾಯೋಜಿಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2013, ದಿನಾಂಕ: 16–11–2013ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**PR 113**

**PR 25**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 27–05–2013
2. ಸರ್ಕಾರಿ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 28–05–2013
3. ಸರ್ಕಾರಿ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 10–07–2013
4. ಸರ್ಕಾರಿ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 26–12–2013

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಿಂದ (4)ರ ಸರ್ಕಾರಿ ಆದೇಶಗಳಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಪಡಿಸುವ ಸಲುವಾಗಿ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡಿ ಆದೇಶಿಸಲಾಗಿತ್ತು.

ಪ್ರಸ್ತುತ ಶ್ರೀ ಕೆ.ಜೆ. ಜಾರ್ಜ್, ಗೃಹ ಸಚಿವರು, ಇವರನ್ನು ರಾಮನಗರ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಿಸಲಾಗಿದ್ದು, ಇವರ ಬದಲಿಗೆ ಶ್ರೀ ಡಿ.ಕೆ. ಶಿವಕುಮಾರ್, ಮಾನ್ಯ ಇಂಧನ ಸಚಿವರು, ಇವರನ್ನು ನೇಮಿಸುವ ಸಲುವಾಗಿ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ಬೆಂಗಳೂರು, ದಿನಾಂಕ: 07ನೇ ಜನವರಿ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶ್ರೀ ಡಿ.ಕೆ. ಶಿವಕುಮಾರ್, ಮಾನ್ಯ ಇಂಧನ ಸಚಿವರು, ಇವರನ್ನು ರಾಮನಗರ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**PR 114**
**PR 100**

## INFORMATION TECHNOLOGY, BIO-TECHNOLOGY AND SCIENCE & TECHNOLOGY SECRETARIAT

**Subject :** New Investment Incentive Policy ($i^4$ Policy: IT, ITES, Innovation Incentives Policy) for the IT/ ITeS/ Start-ups/ Animation/Gaming/Computer Graphics/ Telecom/BPO/ KPO/other Knowledge based Industries

**Read :** State Cabinet decision dt. 17th October, 2013, in Subject No. C-684/2013

**PREAMBLE:**

Karnataka and Bangalore have thrived and progressed in the past decade a great deal due to the growth of IT sector. This sector accounts for more than 30% of the IT exports in the country and employs over 1/3rd of the software engineers in the country. From a mere 1.90 lakh direct jobs in 2001 to over 9 lakh jobs today, the sector has turned out to be the largest employer surpassing even employment provided by the State Government. By 2020, Bangalore will become the single largest IT and technology cluster on the planet in any single location and also the largest employer in the State.

It has become imperative to revisit the Government Policy Initiatives to strengthen the leadership position of the State in this Sector, in the light of increasing challenges to maintain the rate of growth and to achieve the targets of providing over a million jobs by 2020. The areas requiring immediate and urgent attention are as follows:

a. Provision of well-locationed land/facilities (with world class telecom and physical infrastructure).

b. Single window clearance from handshake to inauguration

c. Exemption from Standing Orders of Department of Labour (with the exception of clauses for the protection of women).

d. Concessional electricity tariff, stamp duty and reimbursement of PF/ESI at par or better than any other state.

e. Creating Brand Bangalore 3.0 Society and Bangalore First Fund.

f. Skill Development Policy in conjunction with IT/ITES Industry.

g. Mega projects Special Policy.

A comprehensive proposal providing for incentives, concessions, benefits etc for the IT/ ITeS/ Start-ups/ Animation / Gaming / Computer Graphics/Telecom/BPO/ KPO / other Knowledge based Industries submitted to the State Cabinet was approved in the Cabinet meeting held on 17th October, 2013.

In addition to the Fiscal Incentives and Concessions, Cabinet also approved exemption of these companies from the applicability of Karnataka Industrial Employment (Standing Orders) Rules, 1946, for a period of 5 years, with appropriate clause for protection of women employees and prevention of sexual harassment in work place. Cabinet also approved these Industries to be treated as Essential Services, at par with public utilities, to exempt them from the disruptive effects of general strikes and bandhs.

Hence the order.

**Government Order No. ITD 10 PRM 2013 dated 16th January, 2014**

In the circumstances explained above, Government is pleased to accord approval for the New Investment Incentive Policy ($i^4$ Policy: IT, ITES, Innovation Incentives Policy) for the IT / ITeS/ Start-ups/ Animation / Gaming / Computer Graphics/Telecom/BPO/ KPO / other Knowledge based Industries, as given in the Annexure to this order.

The Departments of Government in Revenue Department (for exemption from Stamp Duty), Labour Department (for exemption from applicability of Karnataka Industrial Employment (Standing Orders) Rules and treating the companies as essential services) and Energy Department (for concessional power tariff) will issue separate notification / orders as per the Cabinet decision.

By order and in the name of the Governor of Karnataka

**SRIVATSA KRISHNA,**
Secretary to Government
Department of IT, BT and S & T

**Annexure to Govt. Order No ITD 10 PRM 2013 dated 16th January, 2014**

**New Investment Incentive Policy ($i^4$ Policy: IT. ITES. Innovation Incentives Policy) for the IT/ ITeS/ Start-ups/ Animation / Gaming / Computer Graphics/ Telecom/BPO/ KPO / other Knowledge based Industries**

1. **Dept. of IT, BT and S&T to be Single Window Clearance Agency:** Government of Karnataka authorises Dept. of IT, BT and S&T to act as the Single Window Agency for clearance of IT/ ITeS/Start-ups/ Animation / Gaming / Computer Graphics/Telecom/BPO/ KPO / other Knowledge based Industries (in place of Karnataka Udyog Mitra). For investments up to Rs. 100 Crores, all decisions would be taken by a Committee headed by the Minister for IT, BT and S&T Department with the concerned Principal Secretaries / Secretaries to Government as Members. For investments above Rs. 100 Crores, decisions would be taken by a Committee headed by Chief Minister, which will have Minister for IT, BT and S&T, Chief Secretary and all concerned Principal Secretaries / Secretaries as Members.

2. **Employment Linked Incentivisation of Land Allotment (E-LILA) outside Bruhat Bangalore Mahanagara Palike Limits:** Land allotment for IT/ ITeS/ Start-ups/ Animation / Gaming/ Computer Graphics / Telecom / BPO / KPO / other Knowledge based Industries at concessional price shall be linked to employment generation for investments outside Bangalore. Government will directly subsidise employment created. There will be no subsidy in land price. This incentive shall be subject to the following conditions:

   i. E-LILA would be for companies with no presence whatsoever in Karnataka, either in their own facility or in any leased facility.

   ii. Companies should be listed on NASDAQ or NYSE or London Stock Exchange / Tokyo Stock Exchange or National Stock Exchange or Bombay Stock Exchange.

   OR

   Companies present in Fortune 500 US list or Fortune 1000 Global list for a minimum period of 3 years.

   OR

   Net worth of Rs 250 Crores of the investing company.

   iii. This incentive shall be available only to direct end users and not to real estate developers.

   iv. Company should undertake to provide minimum employment for 1000 persons, at or above a salary of Rs. 20,000/- per person per month, in respect of Bangalore Urban and Rural Districts (excluding BBMP limits) and Rs. 10,000/- per person per month for all other places in the State.

   v. Government will incentivise employment in the form of a subsidy to be set off against the cost of land.

   vi. Land will be allotted at the rate of one acre for every 1000 jobs created.

   vii. The quantum of subsidy will be linked directly to the jobs created.

   viii. The employment for which Government subsidy is given shall be for a minimum period of 2 years from the date of hiring.

   ix. The company shall give a bank guarantee which can be invoked upon failure to fulfil the conditions regarding employment.

   x. The overall total employment commitment to be met by a company, for the offset against the cost of land / value of lease, would be three years from the date of allotment of land (on sale or lease, as the case may be). This would be extendable to a maximum period of five years by the Government, at the request of the company.

   xi. The quantum of subsidy will be capped at Rs. 60,000/- for each such employment created. This subsidy amount shall be adjusted against the amount payable by the company towards the cost of sale / lease of land.

xii. Rs. 60,000/- per employment created accrues irrespective of whether the company wants to put employees in 100 or 200 or 300 sq.ft each.

xiii. Monitoring of this incentive will be as per declarations for PF/ESI and Shops and Establishments Act / Cheque payments and Salary Slips of employees.

xiv. Allocation of land on sale / lease shall be in accordance with the extant policies of the Government of Karnataka in this regard.

xv. For driving greater presence in Tier II/III cities even companies with a presence in the State can take advantage of it, provided they are not present in that District where they seek to build the new facility.

**3. Exemption from Stamp Duty:** IT/ ITeS/ Start-ups/ Animation / Gaming/ Computer Graphics/Telecom/BPO/ KPO /other Knowledge based Industries shall be entitled to Stamp Duty Exemption of 75% in Mysore and Mangalore, in addition to other locations as per the Industrial Policy.

**4. Concessional Power Tariff:** Industrial Power Tariff (instead of Commercial Power Tariff) will be applicable to all IT/ ITeS/ Start- ups/ Animation / Gaming/ Computer Graphics/Telecom/BPO/KPO / other Knowledge based Industries in the State.

**5.. Exemption of IT / ITeS/ Knowledge/Start-up companies from the applicability of Karnataka Industrial Employment (Standing Orders) Rules, 1946:** State Government to exempt IT/ ITeS/ Start-ups/ Animation / Gaming / Computer Graphics/Telecom/BPO/ KPO / other Knowledge based Industries from the applicability of Karnataka Industrial Employment (Standing Orders) Rules, 1946, for a period of 5 years, with appropriate clause for protection of women employees and prevention of sexual harassment in work place.

**6. Essential Services:** IT/ ITeS/ Start-ups/ Animation / Gaming / Computer Graphics/Telecom/BPO/ KPO / other Knowledge based Industries to be treated at par with public utilities to exempt them from the disruptive effects of general strikes and bandhs.

**7. Reimbursement of PF/ESI:** Government will provide for reimbursement of Provident Fund (PF) / Employees' State Insurance (ESI) of Rs. 2000 per employee per month for 2 years for all new employment created, subject to the condition that the employment is for continuous period of 2 years. Employment data will be verified through Provident Fund (PF) / Employees' State Insurance (ESI) Departments.

**8. Start-ups:** Start-ups companies will be eligible for plug and play space with internet at concessional rates of Rs.5-15 per sft, depending on location. The space may be Government owned/leased or privately leased and allotted. Selection of start-ups by an Apex Committee comprising of Government and IT industry's eminent people. A Start-up will have to vacate space upon reaching the following milestones for revenue or employment:

**Revenue:**

i) When the start-up reaches a revenue of Rs.25 Crores in Bangalore.

ii) When the start-up reaches a revenue of RS.15 Crores in Mysore-Mangalore

iii) When the start-up reaches a revenue of RS.10 Crores 1 in other locations. ')

**Employment:**

i) When the start-up has employed 50 technically qualified personnel in Bangalore.

ii) When the start-up has employed 35 technically qualified personnel in Mysore-Mangalore.

iii) When the start-up has employed 25 technically qualified personnel in other locations.

**9. Creating Brand Bangalore 3.0 and Bangalore First Fund:** Brand Bangalore 3.0 Society and a ***"Bangalore First"*** fund to be set up to promote Bangalore along the lines of India Brand Equity Fund (IBEF) set up by Government of India in association with CII. The **"Bangalore First"** fund will be set up in association with NASSCOM / FICCI / CII / MAIT, under the Chairmanship of Secretary - Dept. of IT, BT and S&T, and Members from the Industry. The ***"Bangalore First"*** fund shall be utilised to establish the credibility of Karnataka as a destination for technology investments in software and IT services, in outsourcing services, as well as Design and Manufacturing of products and services and the rapidly growing animation / Computer-generated imagery (CGI) / media and entertainment industries.

**A VIP Assistance Cell** will be created in the Dept. of IT, BT and S&T, to assist VIP Clients.

**10. Skill Development Policy & Corpus and Default Loan Guarantee Scheme:** Skill Development programs will be taken up in association with the Industry for training un-employed youth in basic IT / BPO / Telecom / ESDM etc, skills to be implemented in a PPP mode. The beneficiaries namely, the trainees, shall also bear part of the expenditure towards Skill Development. Government shall facilitate and support to arrange Skill Development financing through Bank loans. Government will provide a 15% default guarantee to banks and encourage them to extend Skill Development loans at low interest rates, particularly for the youth for employment in the ICT emerging Cities of the State. The specific Skill Development programs and funding required for each shall be decided by a Committee headed by Chief Secretary and other Government and Industry representatives.

11. **Mega Projects:** Any single investment exceeding or equal to Rs. 250 Crores shall be treated as a Mega Project. For such Mega Projects, the State High Level Committee headed by Chief Minister will re-visit each and every incentive / concession and offer a special package.

12. **Strengthening Karnataka's Leadership Position by Using IT /ITES to transform society and giving better access to SMEs and Start-Ups:** Government shall strengthen the State's leadership position by using IT / ITeS to transform Society and to give better access to SMEs and Start-ups through the following three initiatives:-

    a. By giving opportunities to high capability local companies in state e-Gov projects, especially those involving government services to citizens, without insisting on prior track record or turnover criteria which often end up excluding highly talented companies despite having high capabilities. This would be subject to a capability rating (with NASSCOM support to identify objective criteria for rating); develop cloud apps with other states (position Karnataka as the bell weather state) and to fund project execution, in part or whole, via project recourse where the project assets and future revenue streams will be securitized to enable financing of the project from Banks/ financial institutions as in infrastructure projects. This is particularly relevant for government to citizens' services (G2C).

    b. Use the collective buying power of the State to give more opportunities to start-ups and SMEs in the sector by aggregating demand of citizens which only government can do.

    c. Support start-ups and entrepreneurial companies outside government space to transform economy and society. Linkages with mentors/ angel funds etc. would be catalyzed and provided by Government of Karnataka through Department of IT/BT/ST and NASSCOM/ academic institutions/ think tanks etc.

The funding required for each activity will be decided by a Committee headed by Secretary - Dept. of IT, BT and S&T with Government and Industry representatives as Members.

**Srivatsa Krishna,**
**Secretary to Government**
**Department of IT, BT and S & T**

**PR 116**

## ENERGY SECRETARIAT

**SUB:** Formation of Solar City development Committees in the State-reg.

**READ :** 1. Karnataka Renewable Energy Policy 2009-14, GO. No: EN 354 NCE 2008 Dated: 19th January 2010.

2. Solar Policy 2011-16 Notification No. EN 61 NCE 2011 Dated 01.07.2011.

3. MNRE letter no. 40/18/2008/UICA(SE) Dated: 24.08.2009.

**PREAMBLE :**

The major cities in the State are experiencing rapid growth in the peak electricity demand. The electricity utilities are finding it difficult to cope up with this rapid rise in demand and as a' result most of the cities/towns are facing electricity shortages. To cope up with the demand, to reduce dependency on conventional Sources of energy, to reduce Carbon emissions and to make city green it is planned to go for Green energy, with best option as Solar energy. Karnataka is blessed with good Solar radiation with sunny days of around 300days in an year. The average Solar Radiation resource (Direct Normal Irradiance) in Karnataka varies between 4.98 to 5.69 Kwh/Sq Meter. As a result, the "Development of Solar Cities" programme is designed to support/encourage Urban Local Bodies to prepare a Road Map to guide their cities in becoming 'Solar Cities'.

In the Govemment Order read (1) at above, Renewable Energy Policy 2009-14 have been published to harness Green and Clean Renewable Energy Sources in the State for environmental benefits. Further in the Notification dated 01.7.2011 read (2) at above, Government have published the Solar Policy 2011-16 to promote Solar Power as a part of the Renewable Energy in the State.

The 'Solar City' aims at a minimum of 10% reduction in projected demand of conventional energy. The basic aim is to motivate the Urban Local bodies for adopting renewable energy technologies and energy efficiency measures. In a 'Solar City', all types of renewable energy based projects like solar, wind, biomass, small hydro, waste to energy etc. may be installed along with possible energy efficiency measures depending on the need and resource availability in the city.

The Solar City programme aims

- To enable and empower Urban Local bodies to address energy challenges at City – level.
- To provide a framework and support to prepare a Master Plan including assessment of current energy situation, future demand and action plans.
- To build capacity in the Urban Local Bodies and create awareness among all sections of civil society.
- To involve various stakeholders in the planning process.
- To oversee the implementation of sustainable energy options through public - private partnerships.

Ministry of New and Renewable Energy, Government of India, in the letter read at (2); has approved the proposal of converting Mysore and Hubli-Dharwad Cities for development as Solar Cities.

For effective implementation of 'Solar -City" projects, formulation of separate committees is found necessary, chaired by the Deputy Commissioner of the Districts. For Mysore City and Hubli-Dharwad city the committees is formed as per the following order.

After detailed examination of the proposal, the following order is issued.

**Government Order No: EN 87 VSC 2013 Bangalore Dated: 23.12.2013**

Under the Circumstances explained above, Government are pleased to constitute a Committee for development of 'Solar Cities' in Mysore and Hubli-Dharwad consisting the following, with immediate effect and until further orders.

1. Mysore Solar City Development Committee :

| | | |
|---|---|---|
| 1. | Deputy Commissioner, Mysore District. | Chairman |
| 2. | Commissioner, Mysore City Corporation. | Member |
| 3. | Commissioner, Mysore Urban Development Authority. | Member |
| 4. | Executive Engineer (Technical), Chamundeshwari Electricity Supply Company(CESC) Corporate office, Mysore. | Member |
| 5. | Project Engineer, Karnataka .Renewable Energy Development Limited (KREDL) regional office, Mysore. | Member Convener |

2. Hubli-Dharwad Solar City Development Committee:

| | | |
|---|---|---|
| 1. | Deputy Commissioner, Dharwad District. | Chairman |
| 2. | Commissioner, Hubli-Dharwad City Corporation | Member |
| 3. | Commissioner, Hubli-Dharwad urban Development Authority. . | Member |
| 4. | General Manager (Technical), Hubli Electricity Supply Company Limited (HESCOM) Corporate office, Hubli. | Member |
| 5. | Deputy General Manager, Manager, Karnataka Renewable Energy Development Limited (KREDL) regional office, Hubli. | Member Convener |

The said committee shall take all necessary actions to develop Mysore City and Hubli-Dharwad City as Solar Cities duly following MNRE guidelines. The Committee would also submit a quarterly report to M/s KREDL Bangalore on Development of the programme

By Order and in the name of the Governor of Karnataka,
**A.A.CHAPPARBAND**
Under Secretary to Government,
Energy Department

**PR 78**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ವತಿಯಿಂದ ಸೌರ ವಿದ್ಯುತ್ ಚಾಲಿತ ನೀರಾವರಿ ಪಂಪ್‌ಸೆಟ್‌ಗಳು, ಸೌರ ವಿದ್ಯುತ್ ಮೇಲ್ಛಾವಣಿ ಹಾಗೂ ಎಲ್‌ಇಡಿ ಸೌರಶಕ್ತಿ ಕಂದೀಲುಗಳನ್ನು ಒದಗಿಸುವ ಯೋಜನೆಗಳಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರ ಪ್ರಸ್ತಾವನೆ ಸಂಖ್ಯೆ: ಕೆಆರ್‌ಇಡಿ.07.ಆಯವ್ಯಯ.2013/1910 ದಿನಾಂಕ : 20-08-13.

**ಪ್ರಸ್ತಾವನೆ :**

1. ಅಸಂಪ್ರದಾಯಿಕ ಇಂಧನ ಮೂಲಗಳನ್ನು ಪ್ರೋತ್ಸಾಹಿಸಲು ಶಕ್ತಿಯ ರೂಪಗಳಾದ ಪವನ, ಕಿರು ಜಲವಿದ್ಯುತ್, ಜೈವಿಕ ಇಂಧನ, ಸೌರಶಕ್ತಿ ಮತ್ತು ತ್ಯಾಜ್ಯಗಳಿಂದ ವಿದ್ಯುತ್ ಉತ್ಪಾದನೆಗೆ ಉತ್ತೇಜನೆ ನೀಡುವುದು ಸರ್ಕಾರದ ಉದ್ದೇಶವಾಗಿರುತ್ತದೆ. ರಾಜ್ಯದಲ್ಲಿ ಸೌರ ವಿದ್ಯುತ್ ಶಕ್ತಿಯು ಹೇರಳವಾಗಿ ಲಭ್ಯವಿರುವುದರಿಂದ ಮತ್ತು ಸುಸ್ಥಿರವಾಗಿರುವುದರಿಂದ ಸೌರ ವಿದ್ಯುತ್ ಯೋಜನೆಗಳನ್ನು ಅಭಿವೃದ್ಧಿ ಪಡಿಸುವುದು ಸರ್ಕಾರದ ಒಂದು ಕಾರ್ಯಕ್ರಮವಾಗಿರುತ್ತದೆ. ಈ ನಿಟ್ಟಿನಲ್ಲಿ 2013-14ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಹೊಸ ಯೋಜನೆಯಾದ ಸೌರಶಕ್ತಿ ಯೋಜನೆಯ ಅನುಷ್ಠಾನಕ್ಕಾಗಿ ರೂ.10.00 ಕೋಟಿಗಳನ್ನು ಲೆಕ್ಕ ಶೀರ್ಷಿಕೆ 2801-80-800-1-08-059 ಯಡಿ ಒದಗಿಸಲಾಗಿದೆ.

2. ಸೌರಶಕ್ತಿ ಯೋಜನೆಗೆ ಹಂಚಿಕೆಯಾದ ರೂ.10.00 ಕೋಟಿಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ 2013-14ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಈ ಕೆಳಕಂಡ 3 ಯೋಜನೆಗಳನ್ನು ಪ್ರಸ್ತಾಪಿಸಲಾಗಿದೆ.

(ರೂ. ಕೋಟಿಗಳಲ್ಲಿ)

| ಕ್ರ.ಸಂ. | ಯೋಜನೆಗಳ ವಿವರ | 2013–14ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ |
|---|---|---|
| 1. | ರಾಜ್ಯದ ರೈತರಿಗೆ ಸೌರಶಕ್ತಿ ಪಂಪ್‌ಸೆಟ್ ನೀಡುವ ಯೋಜನೆ | 4.00 |
| 2. | ಜಾಲಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆಯ ಅಡಿಯಲ್ಲಿ ಮೇಲ್ಛಾವಣಿ ಸೌರಶಕ್ತಿ ಉಪಕರಣಗಳನ್ನು ಒದಗಿಸುವ ಯೋಜನೆ | 3.00 |
| 3. | ಗೃಹ ಬಳಕೆ ಸೌರಶಕ್ತಿ ಉಪಕರಣಗಳನ್ನು ಶೇ.75ರಷ್ಟು ಸಹಾಯಧನ ಒದಗಿಸುವ ಯೋಜನೆಯಡಿಯಲ್ಲಿ ಎಲ್.ಇ.ಡಿ ಸೌರಶಕ್ತಿ ಕಂದೀಲು (Solar Lantern) ವಿತರಿಸುವ ಯೋಜನೆ | 3.00 |
| | **ಒಟ್ಟು** | **10.00** |

**3.** ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದಿಂದ ಸೌರ ವಿದ್ಯುತ್ ಚಾಲಿತ ನೀರಾವರಿ ಪಂಪ್‌ಸೆಟ್ ಹಾಗೂ ಸೌರ ವಿದ್ಯುತ್ ಮೇಲ್ಛಾವಣಿ ಉಪಕರಣಗಳ ಖರೀದಿಗಾಗಿ, ಉಪಕರಣದ ವೆಚ್ಚದ ಮೇಲೆ ಫಲಾನುಭವಿಗಳಿಗೆ ಶೇಕಡಾ 30% ರಷ್ಟು ಸಹಾಯಧನ ನೀಡಲಾಗುತ್ತದೆ. ಆದರೆ ಸೌರ ಶಕ್ತಿ ಕಂದೀಲು ಯೋಜನೆಗೆ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯವು ಯಾವುದೇ ಸಹಾಯಧನ ನೀಡುವುದಿಲ್ಲ. ಗೃಹ ಬಳಕೆ ಸೌರಶಕ್ತಿ ಕಂದೀಲುಗಳನ್ನು ರಾಜ್ಯ ಸರ್ಕಾರದಿಂದ ಶೇಕಡಾ 75%ರಷ್ಟು ಸಹಾಯಧನವನ್ನು ಒದಗಿಸಿ ನೀಡಲು ಉದ್ದೇಶಿಸಿದೆ ಮತ್ತು ಈ ನಿಟ್ಟಿನಲ್ಲಿ ಸೌರಶಕ್ತಿ ಯೋಜನೆಗಳ ಉತ್ತೇಜನಕ್ಕಾಗಿ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದಿಂದ ನೀಡುವ ಶೇಕಡಾ 30%ರಷ್ಟು ಸಹಾಯಧನವನ್ನು ಉಪಯೋಗಿಸಿಕೊಂಡು 2013–14ನೇ ಸಾಲಿನಲ್ಲಿ ರಾಜ್ಯದ ವತಿಯಿಂದ ಕೆಳಕಂಡ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

| ಕ್ರ.ಸಂ. | ಯೋಜನೆಗಳ ವಿವರ | | ಸೌರಶಕ್ತಿ ಪಂಪ್‌ಶಕ್ತಿ ನೀಡುವ ಯೋಜನೆ | ಜಾಲಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆಯ ಅಡಿಯಲ್ಲಿ ಮೇಲ್ಛಾವಣಿ ಸೌರಶಕ್ತಿ ಉಪಕರಣಗಳನ್ನು ಒದಗಿಸುವ ಯೋಜನೆ | ಎಲ್.ಇ.ಡಿ ಸೌರಶಕ್ತಿ ಕಂದೀಲು (Solar Lantern) ವಿತರಿಸುವ ಯೋಜನೆ | ಒಟ್ಟು ಯೋಜನಾ ವೆಚ್ಚ (ರೂ.ಕೋಟಿಗಳಲ್ಲಿ) |
|---|---|---|---|---|---|---|
| 1 | **ಫಲಾನುಭವಿಗಳ ಸಂಖ್ಯೆ** | ಸಾಮಾನ್ಯ ವರ್ಗ | 99 | 357 | 26666 | – |
| | | ಎಸ್.ಸಿ | 19 | 156 | | – |
| | | ಎಸ್.ಟಿ | 13 | 156 | | – |
| | | ಒಟ್ಟು | **131** | **669** | | – |
| 2 | **ಫಲಾನುಭವಿಗಳ ವಂತಿಗೆ (ಶೇಕಡಾವಾರು)** | ಸಾಮಾನ್ಯ ವರ್ಗ | 25% | 50% | 25% | – |
| | | ಎಸ್.ಸಿ | 15% | 25% | 25% | – |
| | | ಎಸ್.ಟಿ | 15% | 25% | 25% | – |
| 3 | **MNRE ವಂತಿಗೆ (ಶೇಕಡಾವಾರು)** | | 30% | 30% | – | – |
| 4 | **ರಾಜ್ಯ ಸರ್ಕಾರದ ವಂತಿಗೆ** | ಸಾಮಾನ್ಯ ವರ್ಗ | 45% | 20% | 75% | – |
| | | ಎಸ್.ಸಿ | 55% | 45% | 75% | – |
| | | ಎಸ್.ಟಿ | 55% | 45% | 75% | – |
| 5 | **ಸೌರವಿದ್ಯುತ್ ಯೋಜನಾ ವೆಚ್ಚ (ರೂ.ಕೋಟಿಗಳಲ್ಲಿ)** | ರಾಜ್ಯ ಸರ್ಕಾರದ ವಂತಿಗೆ | 4.00 | 3.00 | 3.00 | **10.00** |
| | | MNRE ವಂತಿಗೆ | 2.46 | 2.83 | 0.00 | **5.29** |
| | | ಫಲಾನುಭವಿಗಳ ವಂತಿಗೆ | 1.85 | 3.61 | 1.00 | **6.46** |
| | | ಒಟ್ಟು | **8.31** | **9.64** | **4.00** | **21.75** |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 40 ಪಿಎಸ್‌ಆರ್ 2013(ಭಾಗ–1), ಬೆಂಗಳೂರು, ದಿನಾಂಕ : 30–10–2013.**

ಪ್ರಸ್ತಾವನೆಯಲ್ಲಿನ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ವತಿಯಿಂದ ರೂ.10 ಕೋಟಿ ಸಹಾಯಧನ ಒಳಗೊಂಡ ಸುಮಾರು ರೂ.21.75 ಕೋಟಿಯ, ಈ ಕೆಳಕಂಡ ಸೌರ ವಿದ್ಯುತ್ ಯೋಜನೆಗಳನ್ನು 2013–14ನೇ ಸಾಲಿನಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವತಿಯಿಂದ ಅನುಷ್ಠಾನಗೊಳಿಸಲು ಆದೇಶಿಸಿದೆ.

**a)** ಅನುಬಂಧ–1ರಲ್ಲಿ ವಿವರಿಸಿದಂತೆ ರೈತರಿಗೆ ಸೌರ ವಿದ್ಯುತ್ ಚಾಲಿತ ನೀರಾವರಿ ಪಂಪ್‌ಸೆಟ್‌ನ್ನು ನೀಡಲು.

**b)** ಅನುಬಂಧ–2ರಲ್ಲಿ ವಿವರಿಸಿದಂತೆ ಜಾಲ ರಹಿತ ಸೌರ ವಿದ್ಯುತ್ ಮೇಲ್ಚಾವಣಿ ಯೋಜನೆಯನ್ನು ಅನುಷ್ಠಾನಗೊಳಿಸಲು.

**c)** ಅನುಬಂಧ–3ರಲ್ಲಿ ವಿವರಿಸಿದಂತೆ ಎಲ್.ಇ.ಡಿ ಸೌರ ಶಕ್ತಿ ಕಂದೀಲು (Lanterns)ಗಳನ್ನು ಶೇ.75ರಷ್ಟು ಅನುದಾನದಲ್ಲಿ ವಿವರಿಸಲು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. FD 987 EXP-1/2013, ದಿನಾಂಕ : 7–09–2013 ಮತ್ತು ಯೋಜನಾ ಇಲಾಖೆ ಟಿಪ್ಪಣಿ ಸಂ. PD 11 MCM 2013 ದಿನಾಂಕ: 11–09–2013 ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಟಿಪ್ಪಣಿ ಸಂಖ್ಯೆ: ಗ್ರಾಅಪ 36 ಜೈಆಯ 2013ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಅನುಬಂಧ–1

**1.0 ಸೌರಶಕ್ತಿ ಪಂಪ್‌ಸೆಟ್‌ಗಳ ಅನುಷ್ಠಾನಗೊಳಿಸುವ ಯೋಜನೆ:**

**1.1** ಈ ಯೋಜನೆಯಡಿಯಲ್ಲಿ, ಸೌರಶಕ್ತಿ ಪಂಪ್‌ಸೆಟ್‌ಗಳನ್ನು ಹೊಸದಾಗಿ ಸಂಪರ್ಕಗಳನ್ನು ಹೊಂದುವ ರೈತರಿಗೆ ಮಾತ್ರ ಲಭ್ಯವಾಗುತ್ತದೆ. ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದ ನಿಯಮಗಳ ಪ್ರಕಾರ ಒದಗಿಸಲಾಗುವ ಒಂದು 5 ಹೆಚ್.ಪಿ ಸೌರಶಕ್ತಿ ಪಂಪ್‌ಸೆಟ್‌ನ ಅಂದಾಜು ವೆಚ್ಚ ರೂ. 6.25 ಲಕ್ಷಗಳಾಗಿರುತ್ತದೆ.

**1.2** ಈ ಪ್ರಸ್ತಾವನೆಯ ಪ್ರಕಾರ, ಸಾಮಾನ್ಯ ವರ್ಗಕ್ಕೆ ಸೇರಿದ ಫಲಾನುಭವಿಗಳು ಶೇಕಡಾ 75ರಷ್ಟು ಸಹಾಯಧನದ ಲಾಭ ಪಡೆಯಲಿದ್ದಾರೆ, ಉಳಿದ ಶೇಕಡಾ 25ರಷ್ಟು ವೆಚ್ಚವನ್ನು ಫಲಾನುಭವಿಗಳು ಭರಿಸಬೇಕಾಗಿರುತ್ತದೆ. ಪ್ರಸ್ತಾವನೆಯ ಪ್ರಕಾರ ಯೋಜನಾ ವಿವರಗಳು ಈ ಕೆಳಗಿನಂತೆ ಇರುತ್ತದೆ.

| | |
|---|---|
| ರಾಜ್ಯ ಸರ್ಕಾರದ ಸಹಾಯಧನ | ಶೇಕಡಾ 45ರಷ್ಟು |
| ಕೇಂದ್ರ ಸರ್ಕಾರದ ಸಹಾಯಧನ | ಶೇಕಡಾ 30ರಷ್ಟು |
| ಸಾಮಾನ್ಯ ವರ್ಗದ ಫಲಾನುಭವಿಗಳ ವಂತಿಗೆ | ಶೇಕಡಾ 25ರಷ್ಟು |

**1.3** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಫಲಾನುಭವಿಗಳನ್ನು ಉತ್ತೇಜಿಸುವುದಕ್ಕಾಗಿ, ಈ ವರ್ಗದ ಫಲಾನುಭವಿಗಳ ವಂತಿಗೆಯನ್ನು ಶೇಕಡಾ 15ಕ್ಕೆ ಮಿತಗೊಳಿಸಲಾಗಿದೆ. ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದ ಒಟ್ಟು ಸಹಾಯಧನ ಶೇಕಡಾ 85ರಷ್ಟಿದೆ. ಪ್ರಸ್ತಾವನೆಯ ಪ್ರಕಾರ ಯೋಜನಾ ವಿವರಗಳು ಈ ಕೆಳಗಿನಂತೆ ಇರುತ್ತದೆ.

| | |
|---|---|
| ರಾಜ್ಯ ಸರ್ಕಾರದ ಸಹಾಯಧನ | ಶೇಕಡಾ 55ರಷ್ಟು |
| ಕೇಂದ್ರ ಸರ್ಕಾರದ ಸಹಾಯಧನ | ಶೇಕಡಾ 30ರಷ್ಟು |
| ಫಲಾನುಭವಿಗಳ ವಂತಿಗೆ | ಶೇಕಡಾ 15ರಷ್ಟು |

**1.4 ಆಯವ್ಯಯದ ವಿವರಗಳು:**

**1.4.1** ಸೌರಶಕ್ತಿ ಯೋಜನೆಗಳಿಗೆ ಆಯವ್ಯಯದಲ್ಲಿ ಒದಗಿಸಿರುವ ರೂ.10.00 ಕೋಟಿಗಳಲಿ ರೂ.4.00 ಕೋಟಿಗಳನ್ನು ಸೌರಶಕ್ತಿ ಪಂಪ್‌ಸೆಟ್ ಯೋಜನೆಗೆ ಮೀಸಲಿಡಲಾಗಿದೆ. ಅಂದಾಜು ವೆಚ್ಚದ ವಿವರಗಳು ಈ ಕೆಳಗಿನಂತೆ ಇರುತ್ತದೆ.

**(ರೂ. ಕೋಟಿಗಳಲ್ಲಿ)**

| ಕ್ರ. ಸಂ | ವರ್ಗ | ರಾಜ್ಯ ಸರ್ಕಾರದ ವಂತಿಗೆ | ಕೇಂದ್ರ ಸರ್ಕಾರದ ವಂತಿಗೆ 30% | ಫಲಾನುಭವಿಗಳ ವಂತಿಗೆ | ಒಟ್ಟು ಯೋಜನಾ ವೆಚ್ಚ | ಫಲಾನುಭವಿಗಳ ಸಂಖ್ಯೆ |
|---|---|---|---|---|---|---|
| **1** | ಸಾಮಾನ್ಯ ವರ್ಗ–70% | 2.8 | 1.86 | 1.55 | 6.21 | 99 |
| **2** | ಪರಿಶಿಷ್ಟ ಜಾತಿ–20% | 0.8 | 0.36 | 0.18 | 1.34 | 19 |
| **3** | ಪರಿಶಿಷ್ಟ ಪಂಗಡ–10% | 0.4 | 0.24 | 0.12 | 0.76 | 13 |
| | **ಒಟ್ಟು** | **4.0** | **2.46** | **1.85** | **8.31** | **131** |

**1.4.2** ಪ್ರತಿ ಪಂಪ್‌ಸೆಟ್‌ಗೆ ಆಗುವ ವೆಚ್ಚ ಮತ್ತು ಇಂಧನ ಉಳಿತಾಯದ ವಿವರ:

| | |
|---|---|
| ವ್ಯಾಟ್ ಸಾಮರ್ಥ್ಯ | 5 ಹೆಚ್.ಪಿ |
| MNRE ಪ್ರಕಾರ ಪ್ರತಿ ಸ್ಥಾವರಕ್ಕೆ ತಗಲುವ ಅಂದಾಜು ವೆಚ್ಚ (ಬ್ಯಾಟರಿಯನ್ನೊಳಗೊಂಡು) ರೂ.ಗಳಲ್ಲಿ | ರೂ.6,25,000/– |

| | |
|---|---|
| ಅಂದಾಜು ವಿದ್ಯುತ್ ಉಳಿತಾಯ ದೈನಿಕ (kWh) | 25 ಯೂನಿಟ್ |
| ಒಂದು ಯೂನಿಟ್ (kWh) ಗೆ ತಗಲುವ ವೆಚ್ಚ | ರೂ.4.50/– |
| ದೈನಂದಿನ ಉಳಿತಾಯ ರೂಗಳಲ್ಲಿ | ರೂ.112.50/– |
| ವಾರ್ಷಿಕ ಉಳಿತಾಯ ರೂಗಳಲ್ಲಿ | ರೂ.33,750/– |

**1.5.0 ಸೌರಶಕ್ತಿ ಪಂಪ್‌ಸೆಟ್ ಯೋಜನೆಯ ಧ್ಯೇಯೋದ್ದೇಶಗಳು:**

1.5.1 ಸೌರಶಕ್ತಿ ಪಂಪ್‌ಸೆಟ್ಟನ್ನು ಅಳವಡಿಸುವ ಯೋಜನೆಯನ್ನು ಹೆಚ್ಚಾಗಿ ಪ್ರಚುರಪಡಿಸಲು

1.5.2 ಸೌರಶಕ್ತಿ ಪಂಪ್‌ಸೆಟ್‌ನಿಂದಾಗುವ ಪ್ರಯೋಜನಗಳಾದ ನಿರಂತರ ನೀರು ಸರಬರಾಜು, ಸಾಂಪ್ರದಾಯಿಕ ಇಂಧನ ಮೂಲಗಳ ಅವಲಂಬನೆಯಿಲ್ಲದಿರುವುದು, ಮಿತವ್ಯಯಕಾರಿಯಾಗಿರುವುದು ಹಾಗೂ ದೀರ್ಘಕಾಲಿಕವಾಗಿರುವುದನ್ನು ಪ್ರಚುರಪಡಿಸಲು

1.5.3 ಪ್ರತ್ಯೇಕ/ಸಮುದಾಯ ಅನ್ವಯಗಳಿಗೆ ಸೌರಶಕ್ತಿ ಪಂಪ್‌ಸೆಟ್‌ನ ಬಳಕೆಯು ಬಹಳ ಪರಿಣಾಮಕಾರಿ ನಾವೀನ್ಯ ತರುವ ಯೋಜನೆಯಾಗಿರುತ್ತದೆ ಎಂದು ಜಾಗೃತಿ ಮೂಡಿಸಲು

1.5.4 ವಿಕೇಂದ್ರಿಕೃತ ಸೌರಶಕ್ತಿ ಅನ್ವಯಗಳಿಗೆ ಉಪಯುಕ್ತವಾದ ಒಂದು ಮಾದರಿಯಾಗಿರುವುದನ್ನು ಪ್ರಚುರಪಡಿಸಲು

**1.5.5 ಯೋಜನೆಯ ಉದ್ದೇಶಗಳು**

ಈ ಯೋಜನೆಯಡಿಯಲ್ಲಿ 5 ಹೆಚ್.ಪಿ ಸೌರಶಕ್ತಿ ಪಂಪ್‌ಸೆಟ್‌ನ್ನು ನೀರಾವರಿ ಯೋಜನೆಗೆ ರೈತರ ಜಮೀನನ್ನು ಪರಿಶೀಲಿಸಿದ ನಂತರ ಅನುಮೋದನೆ ನೀಡಲಾಗುವುದು. ಈ ಯೋಜನೆಯನ್ನು ಪ್ರಾರಂಭಿಕವಾಗಿ ಕರ್ನಾಟಕದಲ್ಲಿ ಗುರುತಿಸಲಾದ ಸೋಲಾರ್ ಸಿಟಿ ಜಿಲ್ಲೆಗಳಾದ ಮೈಸೂರು, ಹುಬ್ಬಳ್ಳಿಯಲ್ಲಿ ಪ್ರಾಯೋಗಿಕ ಯೋಜನೆಯಾಗಿ ಅನುಷ್ಠಾನಗೊಳಿಸಿ, ಯಶಸ್ಸನ್ನು ಅವಲಂಬಿಸಿ ಬೇರೆ ಪ್ರದೇಶಗಳಲ್ಲಿ ನೀರಿನ ಲಭ್ಯತೆಯನ್ನು ಅನುಸರಿಸಿ ಅನುಷ್ಠಾನಗೊಳಿಸಲಾಗುವುದು.

**1.6 ಅನುಷ್ಠಾನ ಕಾರ್ಯಚಟುವಟಿಕೆಗಳು**

ಸಹಾಯಧನದ ಹಂಚಿಕೆ ಹಾಗೂ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುಷ್ಠಾನಗೊಳಿಸುವ ಸಂಸ್ಥೆಯನ್ನು ಗುರುತಿಸುವ ಹೊಣೆಗಾರಿಕೆಯು ಕೆ.ಆರ್.ಇ.ಡಿ.ಎಲ್ ಸಂಸ್ಥೆಯದ್ದಾಗಿರುತ್ತದೆ. ಟೆಂಡರ್ ಪ್ರಕ್ರಿಯೆಯ ಮೂಲಕ ಅನುಷ್ಠಾನಗೊಳಿಸುವ ಸಂಸ್ಥೆಯನ್ನು ನಿಯೋಜಿಸಲಾಗುವುದು. ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಸಂಸ್ಥೆಯು ಸೌರ ಮೇಲ್ಛಾವಣಿಯನ್ನು ಎಂ.ಎನ್.ಆರ್.ಇ ಮಾರ್ಗಸೂಚಿಗಳ ಅನುಸಾರ ಸ್ಥಾಪಿಸಬೇಕಾಗಿರುತ್ತದೆ ಹಾಗೂ ಖಾತರಿ ಅವಧಿಯಲ್ಲಿ ಬಿಡಿ ಭಾಗಗಳನ್ನು ಬದಲಾಯಿಸುವುದು ಮತ್ತು ಸಿಸ್ಟಮ್‌ಗಳನ್ನು ಸುಗಮವಾಗಿ ನಿರ್ವಹಿಸುವ ಜವಾಬ್ದಾರಿ ಅನುಷ್ಠಾನಗೊಳಿಸುವ ಸಂಸ್ಥೆಯದಾಗಿರುತ್ತದೆ.

**1.7 ಕೆ.ಆರ್.ಇ.ಡಿ.ಎಲ್ ಪಾತ್ರ**

ಕೆ.ಆರ್.ಇ.ಡಿ.ಎಲ್. ಸಂಸ್ಥೆ, ಕಾರ್ಯಕ್ರಮದ ನಿರ್ವಾಹಕರಾಗಿದ್ದು ಈ ಕೆಳಕಂಡ ಚಟುವಟಿಕೆಗಳನ್ನು ಖಾತರಿ ಪಡಿಸಿಕೊಳ್ಳಬೇಕಾಗಿರುತ್ತದೆ.

1.7.1 ಫಲಾನುಭವಿಗಳ ಆಯ್ಕೆಗಾಗಿ ಮಾನದಂಡ ನಿರೂಪಿಸುವುದು.

1.7.2 ಅನುಷ್ಠಾನಗೊಳಿಸುವ ಸಂಸ್ಥೆಯನ್ನು ಆಯ್ಕೆ ಮಾಡುವಾಗ ಪಾರದರ್ಶಕತೆಯನ್ನು ನಿರ್ವಹಿಸುವುದು ಮತ್ತು ಫಲಾನುಭವಿಯು ಈ ಯೋಜನೆಯ ಲಾಭವನ್ನು ಪಡೆಯುವಂತೆ ಖಾತರಿ ಪಡಿಸಿಕೊಳ್ಳುವುದು.

1.7.3 ರಾಷ್ಟ್ರ ಹಾಗೂ ರಾಜ್ಯದ ವತಿಯಿಂದ ಸಹಾಯಧನ ಮಂಜೂರು ಮಾಡಿಸಿಕೊಳ್ಳುವುದು.

1.7.4 ಅನುಷ್ಠಾನಗೊಳಿಸುವ ಸಂಸ್ಥೆಯ ಮೇಲ್ವಿಚಾರಣೆ ಮತ್ತು ತಪಾಸಣೆ ಇದರ ಜವಾಬ್ದಾರಿಯಾಗಿರುತ್ತದೆ.

## ಅನುಬಂಧ–2

**2.0 ಜಾಲ ಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆ:**

**2.1** ಸೌರಶಕ್ತಿ ಮೇಲ್ಛಾವಣಿ ಯೋಜನೆಯಡಿಯಲ್ಲಿ, ಸೌರಶಕ್ತಿ ಮೇಲ್ಛಾವಣಿ ವ್ಯವಸ್ಥೆಯನ್ನು (0.5 ಕಿವ್ಯಾ ಮತ್ತು 1.0 ಕಿವ್ಯಾ ಸಾಮರ್ಥ್ಯದ ಸೌರಶಕ್ತಿ ಮೇಲ್ಛಾವಣಿ) ಸೋಲಾರ್ ನಗರ ಪ್ರದೇಶಗಳಲ್ಲಿನ ಮನೆಗಳಲ್ಲಿ ಗೃಹಬಳಕೆಗಾಗಿ ಪ್ರಾಯೋಗಿಕವಾಗಿ ಅಳವಡಿಸಿ, ಉತ್ಪಾದನೆಯಾಗುವ ವಿದ್ಯುತ್‌ನ್ನು ಸ್ವಯಂ ಬಳಕೆಗಾಗಿ ಉಪಯೋಗಿಸಲ್ಪಡುವುದು. ಪ್ರಯೋಗಿಕ ಯೋಜನೆಯ ಯಶಸ್ಸಿನ ಆಧಾರದ ಮೇಲೆ ಯೋಜನೆಯನ್ನು ಕರ್ನಾಟಕದ ಬೇರೆ ನಗರಗಳಿಗೆ ವಿಸ್ತರಿಸಲಾಗುವುದು. ಈ ಯೋಜನೆಯನ್ನು ಬೆಂಗಳೂರು, ಮೈಸೂರು ಮತ್ತು ಹುಬ್ಬಳ್ಳಿ ನಗರ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲಾಗುವುದು. ಈ ಯೋಜನೆಯ ಶೇಕಡಾ 50%ರಷ್ಟು ಸಹಾಯಧನವನ್ನು ಬೆಂಗಳೂರು ನಗರ ಪ್ರದೇಶದಲ್ಲಿ ಉಪಯೋಗಿಸಿ, ಉಳಿದ ಸಹಾಯಧನವನ್ನು ಇನ್ನೆರಡು ನಗರ ಪ್ರದೇಶಗಳಲ್ಲಿ ಸಮನಾಗಿ ಹಂಚಲಾಗುವುದು. ಮೊದಲು ಬಂದ ಫಲಾನುಭವಿಗಳಿಗೆ ಆದ್ಯತೆ ನೀಡಲಾಗುವುದು.

**2.2** ಸೌರಶಕ್ತಿ ಯೋಜನೆಗಳಿಗೆ ಆಯವ್ಯದಲ್ಲಿ ಒದಗಿಸಿರುವ ರೂ.10.00 ಕೋಟಿಗಳಲ್ಲಿ ರೂ.3.00 ಕೋಟಿಗಳನ್ನು ಜಾಲ ಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆಗೆ ಮೀಸಲಿಡಲಾಗಿದೆ. ಈ ಯೋಜನೆಯ ಒಟ್ಟು ವೆಚ್ಚ ರೂ.9.44 ಕೋಟಿ ಆಗಿರುತ್ತದೆ. ಪ್ರತಿ **kWp** ಸಾಮರ್ಥ್ಯಕ್ಕೆ **MNRE** ನಿಗಧಿಪಡಿಸಿರುವ ದರ ರೂ.2.10ಲಕ್ಷ, ಸುಮಾರು 669 ಫಲಾನುಭವಿಗಳು ಇದರ ಸೌಲಭ್ಯ ಪಡೆಯಲಿದ್ದಾರೆ. ವಿವರಗಳು ಈ ಕೆಳಗಿನಂತೆ ಇರುತ್ತದೆ.

**(ರೂ. ಕೋಟಿಗಳಲ್ಲಿ)**

| ಕ್ರ.ಸಂ | ವರ್ಗ | ರಾಜ್ಯ ಸರ್ಕಾರದ ವಂತಿಗೆ | ಕೇಂದ್ರ ಸರ್ಕಾರದ ವಂತಿಗೆ (30%) | ಫಲಾನುಭವಿಗಳ ವಂತಿಗೆ | ಒಟ್ಟು | ಫಲಾನುಭವಿಗಳ ಸಂಖ್ಯೆ |
|---|---|---|---|---|---|---|
| 1 | ಸಾಮಾನ್ಯ ವರ್ಗ | 1.00 | 1.5 | 2.5 | 5.0 | 0.5 ಕಿವ್ಯಾ – **238**<br>1.00 ಕಿವ್ಯಾ – **119** |
| 2 | ಪರಿಶಿಷ್ಟ ಜಾತಿ | 1.00 | 0.666 | 0.555 | 2.22 | 0.5 ಕಿವ್ಯಾ – **104**<br>1.00 ಕಿವ್ಯಾ – **52** |

| ಕ್ರ.ಸಂ | ವರ್ಗ | ರಾಜ್ಯ ಸರ್ಕಾರದ ವಂತಿಗೆ | ಕೇಂದ್ರ ಸರ್ಕಾರದ ವಂತಿಗೆ (30%) | ಫಲಾನುಭವಿಗಳ ವಂತಿಗೆ | ಒಟ್ಟು | ಫಲಾನುಭವಿಗಳ ಸಂಖ್ಯೆ |
|---|---|---|---|---|---|---|
| **3** | ಪರಿಶಿಷ್ಟ ಪಂಗಡ | 1.00 | 0.666 | 0.555 | 2.22 | 0.5 ಕಿವ್ಯಾ – **104**<br>1.00 ಕಿವ್ಯಾ – **52** |
| | ಒಟ್ಟು | **3.00** | **2.83** | **3.61** | **9.44** | 0.5 ಕಿವ್ಯಾ – **446**<br>1.00 ಕಿವ್ಯಾ – **223** |

**2.3** ವೆಚ್ಚ ಮತ್ತು ಉಳಿತಾಯದ ವಿವರಗಳು ಈ ಕೆಳಕಂಡಂತೆ:

**2.3.1 For General Category**

| **Roof Top Solar PV System** | | |
|---|---|---|
| State Subsidy Share | Rs. 1.00 Cr | 20% subsidy by state government |
| MNRE Subsidy Share | Rs. 1.50 Cr | 30% subsidy by MNRE |
| Total Subsidy | Rs. 2.50 Cr | Total subsidy - 50% of the cost of the system |
| User Share | Rs. 2.50 Cr | 50% of the cost of the system |
| Total Project Cost | Rs. 5.00 Cr | Total Subsidy of 50%<br>Beneficiary Share 50% |

**2.3.1.1 Costing and Power Savings**

| **Budget Breakup** | | |
|---|---|---|
| | 1 kWp System* | 0.5kWp System* |
| Watt Capacity | 1000 watts | 500 watts |
| Cost Per Unit as per MNRE<br>benchmark cost (With battery) | Rs. 2,10,000/- | Rs. 1,05,000/- |
| Physical.Targets *(Assuming 50% applications are for 1KW system and 50% applications are for 0.5 KW system) | 119No's | 238No's |
| * Based on beneficiary application and verification of need 0.5KW - 1 KW systems to be approved. | | |
| Power Saving | 1KW System | 0.5KW System |
| Generation Per Day (Kwh/day) | 5 Kwh/day | 2.5Kwh/day |
| Power Saving/annum(Kwh)<br>(5 Kwh/day x 119No's x 300 sunny days for 1 K w system)<br>(2.5Kwh/day x 238No's x 300sunny days for 00.5Kw system) | 1,78,500 Kwh<br>( assuming 300 sunny days/year) | 1,78,500 Kwh<br>( assuming 300 sunny days/year) |
| Unit Cost per KWh | Rs 4.50/- | Rs 4.50/- |
| Total Savings (Rs)/day | Rs 22.5/- | Rs 11.25/- |
| Total Savings (Rs)/day | Rs 8,03,250/- | Rs 8,03,250/- |
| **Total Savings of 1KW system & 0.5 KW system per year** | **Rs 16,06,500/-** | |

**2.3.2 For Schedule Caste**

| **Roof Top Solar PV System** | | |
|---|---|---|
| State Subsidy Share | Rs. 1.00 Cr | 45% subsidy by state government |
| MNRE Subsidy Share | Rs. 66,66,667/- | 30% subsidy by MNRE |
| Total Subsidy | Rs. 1,66,66,667/- | Total subsidy - 75% of the cost of the system |
| User Share | Rs 55,55,555/- | 25% of the cost of the system |
| Total Project Cost | Rs.2,22,22,222/- | Total Subsidy of 75%<br>Beneficiary Share 25% |

**2.3.2.1 Costing and Power Savings**

| **Budget Breakup** | | |
|---|---|---|
| | 1 kWp System* | 0.5kWp System* |
| Watt Capacity | 1000 watts | 500 watts |
| Cost Per Unit as per MNRE benchmark cost (With battery) | Rs. 2,10,000/- | Rs. 1,05,000/- |
| Physical.Targets*(Assuming 50% applications are for 1KW system and 50% applications are for 0.5 KW system) | 52 No's | 104 No's |
| * Based on beneficiary application and verification of need 0.5KW - 1 KW systems to be approved. | | |
| Power Saving | 1KW System | 0.5 KW System |
| Generation Per Day (Kwh/day) | 5 Kwh/day | 2.5Kwh/day |
| Power Saving/annum(Kwh)<br>(5 Kwh/day x 52No's x 300 sunny days for 1 K w system)<br>(2.5Kwh/day x 104No's x 300 sunny days for 0.5Kw system) | 78,000 Kwh ( assuming 300 sunny days/year) | 78,000 Kwh (assuming 300 sunny days/year) |
| Unit Cost per KWh | Rs 4.50/- | Rs 4.50/- |
| Total Savings (Rs)/day | Rs 22.5/- | Rs 11.25/- |
| Total Savings (Rs)/year | Rs 3,51,000/- | Rs 3,51,000/- |
| **Total Savings of 1KW system & 0.5 KW system per year** | **Rs 7,02,000/-** | |

**2.3.3 For Schedule Tribe**

| **Roof Top Solar PV System** | | |
|---|---|---|
| State Subsidy Share | Rs. 1.00 Cr | 45% subsidy by state government |
| MNRE Subsidy Share | Rs. 66,66,667/- | 30% subsidy by MNRE |
| Total Subsidy | Rs. 1,66,66,667/- | Total subsidy - 75% of the cost of the system |
| User Share | Rs 55,55,555/- | 25% of the cost of the system |
| Total Project Cost | Rs.2,22,22,222/- | Total Subsidy of 75%<br>Beneficiary Share 25% |

**2.3.3.1 Costing and Power Savings**

| **Budget Breakup** | | |
|---|---|---|
| | 1 kWp System* | 0.5kWp System* |
| Watt Capacity | 1000 watts | 500 watts |
| Cost Per Unit as per MNRE benchmark cost (With battery) | Rs. 2,10,000/- | Rs. 1,05,000/- |
| Physical.Targets*(Assuming 50% applications are for 1KW system and 50% applications are for 0.5 KW system) | 52 No's | 104 No's |
| * Based on beneficiary application and verification of need 0.5KW - 1 KW systems to be approved. | | |
| Power Saving | 1KW System | 0.5KW System |
| Generation Per Day (Kwh/day) | 5 Kwh/day | 2.5Kwh/day |
| Power Saving/annum(Kwh)<br>(5 Kwh/day x 52No's x 300 sunny days for 1 K w system)<br>(2.5 Kwh/day x 104No's x 300 sunny days for 0.5Kw system) | 78,000 Kwh ( assuming 300 sunny days/year) | 78,000 Kwh (assuming 300 sunny days/year) |
| Unit Cost per KWh | Rs 4.50/- | Rs 4.50/- |
| Total Savings (Rs)/day | Rs 22.5/- | Rs 11.25/- |
| Total Savings (Rs)/year | Rs 3,51,000/- | Rs 3,51,000/- |
| **Total Savings of 1KW system & 0.5 KW system per year** | **Rs 7,02,000/-** | |

**2.4** ಜಾಲಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಾರ್ಗಸೂಚಿಗಳು (Guidelines) ಈ ಕೆಳಕಂಡಂತೆ:

**2.4.1 Background**

Karnataka Renewable Energy Development Ltd. (KREDL) is an organization devoted entirely to the promotion of non-conventional energy sources in Karnataka. The organization aim is to promote projects for harnessing energy form wind, small hydro, biomass, solar energy and energy recovery from wastes through . private investment. • .

Government of Karnataka together with the Ministry of New and Renewable Energy (MNRE), Government of India has introduced a' Subsidy linked solar roof top PV grid system for households and apartment in 'cities. The scheme includes providing solar PV roof top system that has the provision to be connected to grid. So households that already have grid connection are eligible to apply under this scheme.

**2.4.2 Objective**

**2.4.2.1** To create awareness and demonstrate effective and innovative use of Solar systems for individual/community.

**2.4.2.2** The Government would develop a pragmatic .. approach within which supplier would implement the programme in various households.

**2.4.2.3** To promote applications of solar energy for meeting the targets set in the Jawaharlal Nehru National. Solar Mission.

**2.4.2.4** To encourage innovation in addressing market needs and promoting sustainable business models.

**2.4.2.5** To create a paradigm shift needed for commoditization of decentralized solar applications.

**2.4.3 Scope of Scheme**

**2.4.3.1** The scheme would be applicable to selected cities - Bangalore, Mysore, and Hubli and would focus on promoting decentralized systems to meet / supplement lightning, electricity/power, heating and cooling energy requirements. .

**2.4.3.2** Under the roof-top solar photo voltaic system scheme; households with connected load of up to 1Kw will be eligible to apply/avail capital subsidy.

**2.4.3.3 Boundary conditions for support to roof-top off-grid system**

- Financial assistance would be 50% of the cost for system for General Category and 75% of the cost for system for SC and ST category with battery storage (or). a maximum of Rs 210/watt with battery for 1KW Spv System and Rs 105/watt for 0.5 KW SPV system, whichever is lower.
- The capital subsidy/Wp area, as given above, is based on 50% of the benchmark cost of the system for general Category and 75% of the benchmark cost of the system for SC and ST category, which would be reviewed annually.
- Use of the best/competitive and innovative technologies available globally would be allowed, subject to standards and technical parameters, laid down by MNRE.
- The government/KREDL reserves the right to modify any of the terms and conditions given in this scheme.

**2.4.4 Implementation Arrangements**

**2.4.4.1** While the overall responsibility of allocation disbursement of subsidy and identification of program implementation agency is done by KREDL based on open tender system, the program implementing agency will be responsible for installation of the system. Independent agency, identified by KREDL through tender process will verify and report on the implementation of the scheme.

**2.4.4.2 Role of Implementing Agency:-**

**2.4.4.2.1** Providing roof top PV system as per configuration specified in the MNRE norms/specifications.

**2.4.4.2:2** Replace of spare parts during-warranty period as defined in the replacement guidelines

**2.4.4.2.3** Maintenance during warranty period

**2.4.4.2.4** Installation and commission of the system as per the guidelines defined in work order.

**2.4.4.3 Role of KREDL**

KREDL, Government of Karnataka, will act as a program administrator and ensure following activities,

**2.4.4.3.1** To invite applications through newspaper advertisement by seeking individual households to apply with a deposit of Rs 25,000.

**2.4.4.3.2** Selection of beneficiary on first cum first serve basis.

**2.4.4.3.3** Define criteria for selection of beneficiary. -

**2.4.4.3.4** Maintain a transparent system while selecting implementing agency.

**2.4.4.3.5** Disbursement of funds.

**2.4.4.3.6** Monitoring and inspection of the work done by implementing agency.

**2.4.5 Funding Pattern**

KREDL to submit project proposals to state government and MNRE to obtain subsidy. On approval of the subsidy, KREDL to appoint implementing agency via open tender system. KREDL to release subsidy on completion of work and verification of installation.

The scheme would be implemented through KREDL, which will be the designated nodal agency for disbursement of subsidy.

**2.4.6 Approval Mechanism**

KREDL will approve and issue work order to selected implementing agency after evaluation of all the bids. The entire process of receiving proposals, processing them and giving approvals would be documented and signed-off by concerned department head of KREDL.

**2.4.7 Monitoring and Evaluation**

At the primary level of monitoring, implementing agency shall be responsible for monitoring parameters such as end-use verification and compliances. As an additional level of monitoring, KREDL and ESCOM officials would be involved for ground truthing. The independent evaluation shall include pre-defined auditing progress review, inspection, performance reporting.

**2.4.8 Technical Requirements**

The scheme would require the project proponents to strictly adhere to the national/ international standards as specified by MNRE from time to time.

**2.4.9 Interpretation of the Scheme Guidelines**

In case of any ambiguity in interpretation of any of the provisions of these guidelines, the decision of the KREDL shall be final.

**2.4.10 Review**

The implementation of scheme would be reviewed by KREDL at quarterly interval.

**ಅನುಬಂಧ–3**

**3.0 ಗೃಹಬಳಕೆ ಸೌರಶಕ್ತಿ ಉಪಕರಣಗಳನ್ನು ಖರೀದಿಸುವ ಯೋಜನೆಯಡಿಯಲ್ಲಿ ಎಲ್.ಇ.ಡಿ ಸೌರಶಕ್ತಿ ಕಂದೀಲು (Solar Lantern) ಗಳನ್ನು ಒದಗಿಸುವ ಯೋಜನೆ:**

3.1 ಸೌರಶಕ್ತಿ ಯೋಜನೆಗಳಿಗೆ ಆಯವ್ಯಯದಲ್ಲಿ ಒದಗಿಸಿರುವ ರೂ.10.00 ಕೋಟಿಗಳಲ್ಲಿ ರೂ.3.00 ಕೋಟಿಗಳನ್ನು ನವೀಕರಿಸಬಹುದಾದ ಇಂಧನ ಮೂಲಗಳನ್ನು ಉತ್ತೇಜಿಸಲು ಗೃಹ ಬಳಕೆ ಸೌರಶಕ್ತಿ ಉಪಕರಣಗಳನ್ನು ಶೇ.75ರಷ್ಟು ಸಹಾಯಧನವನ್ನು ಮೀಸಲಿಡಲಾಗಿದೆ.

**3.2 ಯೋಜನೆ ಉದ್ದೇಶ:–**

3.2.1 ಈ ಯೋಜನೆಯು ರಾಜ್ಯದ 4 ಕಂದಾಯ ವಿಭಾಗಗಳಲ್ಲಿನ ಆಯ್ದ ಜಿಲ್ಲೆಗಳ ಜಿಲ್ಲಾ ಪಂಚಾಯತ್‌ಗಳಲ್ಲಿ ವಿಕೇಂದ್ರಿಕೃತ ವ್ಯವಸ್ಥೆಯ ಮೂಲಕ ಉತ್ತೇಜಿಸಲು ಹಾಗೂ ವಿದ್ಯುತ್ ಶಕ್ತಿಯನ್ನು ಪೂರೈಸಲು ಗಮನ ಹರಿಸಲಾಗಿದೆ.

3.2.2 ಸೌರಶಕ್ತಿ ಯೋಜನೆಗಳ ಅಡಿಯಲ್ಲಿ, ಗೃಹೋಪಯೋಗಕ್ಕೆ ಎಲ್.ಇ.ಡಿ. ಸೌರಶಕ್ತಿ ಕಂದೀಲುಗಳನ್ನು ದುರ್ಗಮ ಹಾಗೂ ಗುಡ್ಡಗಾಡು ಪ್ರದೇಶಗಳ ಮತ್ತು ವಿದ್ಯುತ್ ಸರಬರಾಜು ಇಲ್ಲದ ಗ್ರಾಮ/ಕೊಪ್ಪಲುಗಳ ಫಲಾನುಭವಿಗಳಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹಾಗೂ ವಿದ್ಯುತ್ ವಿತರಣಾ ಕಂಪನಿಗಳೊಂದಿಗೆ ಸಮನ್ವಯದೊಂದಿಗೆ ಗುರುತಿಸಿ, ಇಂತಹ ಫಲಾನುಭವಿಗಳಿಗೆ ಸೌರಶಕ್ತಿ ಲಾಂದ್ರಗಳನ್ನು ಒದಗಿಸಲಾಗುವುದು. ರಾಜ್ಯ ಸರ್ಕಾರದಿಂದ ಶೇ.75ರಷ್ಟು ಸಹಾಯಧನವನ್ನು ನೀಡಲಾಗುತ್ತದೆ. ಫಲಾನುಭವಿಗಳ ವಂತಿಕೆ ಕೇವಲ ಶೇ.25ರಷ್ಟಿಗೆ ಮಾತ್ರ ಸೀಮಿತಗೊಳಿಸಿದೆ.

3.2.3 ಈ ಕೆಳಕಂಡ ನಿಯಮಗಳಡಿಯಲ್ಲಿ ಸೌರ ಗೃಹೋಪಯೋಗಿ ವಸ್ತುಗಳ ಯೋಜನೆಯನ್ನು ಬೆಂಬಲಿಸಲಾಗುವುದು.

3.2.3.1 ಸಾಮಾನ್ಯ ವರ್ಗ, ಎ.ಸ್ಸಿ., ಎಸ್.ಟಿ., ವರ್ಗದವರಿಗೆ ಸೌರಶಕ್ತಿ ಲಾಂದ್ರಗಳ ಶೇ.75ರಷ್ಟು ಹಣಕಾಸಿನ ನೆರವು ನೀಡಲಾಗುತ್ತದೆ. ಸೌರಶಕ್ತಿ ಲಾಂದ್ರಗಳ ಶೇ.25ರಷ್ಟು ವೆಚ್ಚವನ್ನು ಫಲಾನುಭವಿಗಳಿಂದ ಭರಿಸಬೇಕಾಗಿರುತ್ತದೆ.

3.2.3.2 ಸಾಮಾನ್ಯ ವರ್ಗ, ಎ.ಸ್ಸಿ., ಎಸ್.ಟಿ., ವರ್ಗದವರಿಗೆ ಮೇಲೆ ತಿಳಿಸಲಾಗಿರುವ ಬಂಡವಾಳ ಸಹಾಯಧನವನ್ನು ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದ ಸೌರಶಕ್ತಿ ಲಾಂದ್ರಗಳ ಬೆಂಚ್‌ಮಾರ್ಕ್ ವೆಚ್ಚವನ್ನು ಆಧರಿಸಿ ಒದಗಿಸಲಾಗುವುದು.

3.2.3.3. ಗುಣಮಟ್ಟ/ಸ್ಪರ್ಧಾತ್ಮಕ ಮತ್ತು ಜಾಗತಿಕ ಕ್ಷೇತ್ರದಲ್ಲಿ ಲಭ್ಯವಿರುವ ನವೀನ ತಂತ್ರಜ್ಞಾನ ಬಳಸಿ, ಎಂ.ಎನ್.ಆರ್.ಇಯ ನಿಯಮಾವಳಿಗಳ ಪ್ರಕಾರ ಒದಗಿಸಲಾಗುವುದು.

3.2.3.4 ನಿಯಮಗಳು ಮತ್ತು ಷರತ್ತುಗಳನ್ನು ಮಾರ್ಪಡಿಸುವ ಹಕ್ಕು ಸರ್ಕಾರ/ಕೆ.ಆರ್.ಇ.ಡಿ.ಎಲ್ ಸಂಸ್ಥೆಯದ್ದಾಗಿರುತ್ತದೆ.

**3.3 ಈ ಯೋಜನೆಯ ವಿವರಗಳು ಈ ಕೆಳಗಿನಂತಿದೆ.**

| ಕ್ರ ಸಂ | ವಿವರಗಳು | ಅಂದಾಜು ವೆಚ್ಚ (ಒಂದಕ್ಕೆ ರೂ.ಗಳಲ್ಲಿ) | ಕೇಂದ್ರ ಸರ್ಕಾರದ ಸಹಾಯಧನ | ರಾಜ್ಯ ಸರ್ಕಾರದಿಂದ ಪ್ರಸ್ತಾವನೆಯ ಅನ್ವಯ ಪ್ರತಿಯೊಂದರ ಶೇ.75 ಭಾಗ ರೂ.ಗಳಲ್ಲಿ | ಫಲಾನುಭವಿಗಳ ವಂತಿಗೆ 25% (ಪ್ರತಿಯೊಂದಕ್ಕೆ ರೂ.ಗಳಲ್ಲಿ) | ಒಟ್ಟು ಫಲಾನುಭವಿಗಳ ಸಂಖ್ಯೆಗಳು | ಒಟ್ಟು ರಾಜ್ಯ ಸರ್ಕಾರ ಸಹಾಯಧನ (ರೂ.ಗಳಲ್ಲಿ) | ಒಟ್ಟು ಯೋಜನಾ ವೆಚ್ಚ |
|---|---|---|---|---|---|---|---|---|
| 1 | ಎಲ್.ಇ.ಡಿ ಸೌರಶಕ್ತಿ ಲಾಂದ್ರ | 1500/– | – | 1125/– | 375/– | 26666 | 3 ಕೋಟಿ | 4 ಕೋಟಿ |

**3.4 ಅನುಷ್ಠಾನ ಚಟುವಟಿಕೆಗಳು**

ಸಹಾಯಧನದ ಹಂಚಿಕೆ ಹಾಗೂ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಸಂಸ್ಥೆಯನ್ನು ಗುರುತಿಸುವ ಹೊಣೆಗಾರಿಕೆಯು ಕೆ.ಆರ್.ಇ.ಡಿ.ಎಲ್ ಸಂಸ್ಥೆಯದ್ದಾಗಿರುತ್ತದೆ. ಟೆಂಡರ್ ಪ್ರಕ್ರಿಯೆಯ ಮೂಲಕ ಅನುಷ್ಠಾನಗೊಳಿಸುವ ಸಂಸ್ಥೆಯನ್ನು ನಿಯೋಜಿಸಲಾಗುವುದು. ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಹೊಣೆಗಾರಿಕೆಯು ವಿದ್ಯುತ್ ಸರಬರಾಜು ಕಂಪನಿಗಳದ್ದಾಗಿರುತ್ತದೆ. ಫಲಾನುಭವಿಗಳನ್ನು ಆಯ್ಕೆ ಮಾಡುವ ಜವಾಬ್ದಾರಿ ಆರ್.ಡಿ.ಪಿ.ಆರ್

ಸಂಸ್ಥೆಯ ಗ್ರಾಮಸಭಾ ಮತ್ತು ಪಂಚತಂತ್ರ ವರ್ಕ್‌ಸಾಫ್ಟ್ ಮುಖಾಂತರ ಮಾಡಲಾಗುತ್ತದೆ. ಕೆ.ಆರ್.ಇ.ಡಿ.ಎಲ್‌ನಿಂದ ಟೆಂಡರ್ ಪ್ರಕ್ರಿಯೆ ಮೂಲಕ ಗುರುತಿಸಿದ ಅನುಷ್ಠಾನಗೊಳಿಸುವ ಸಂಸ್ಥೆಯು ಯೋಜನೆಯ ಪರಿಶೀಲನೆ ಮತ್ತು ಯೋಜನೆಯ ಅನುಷ್ಠಾನ ವರದಿ ಮಾಡಬೇಕಾಗಿರುತ್ತದೆ.

**3.5.0 ಅನುಷ್ಠಾನಗೊಳಿಸುವ ಸಂಸ್ಥೆಯ ಪಾತ್ರ :–**

3.5.1 ಎಂ.ಎನ್.ಆರ್.ಇರವರ ನಿಯಮಗಳು/ನಿರ್ದಿಷ್ಟತೆಗಳನ್ವಯ ಸೂಚಿಸಲಾದಂತೆ ಸೌರಶಕ್ತಿ ಲಾಂದ್ರಗಳನ್ನು ಸಂರಚನೆಯಂತೆ ಒದಗಿಸುವುದು.

3.5.2 ಮಾರ್ಗಸೂಚಿಗಳ ಅನುಸಾರ ಖಾತರಿ ಅವಧಿಯಲ್ಲಿ ಬಿಡಿ ಭಾಗಗಳನ್ನು ಬದಲಾಯಿಸುವುದು.

3.5.3 ಉಪಕರಣಗಳ ಖಾತರಿ ಅವಧಿಯಲ್ಲಿ ನಿರ್ವಹಣೆ.

3.5.4 ಉಪಕರಣಗಳ ಅಳವಡಿಕೆ ಮತ್ತು ಸ್ಥಾಪನೆಯನ್ನು ಕಾರ್ಯಾದೇಶದ ಮಾರ್ಗಸೂಚಿಗಳ ಅನುಸಾರ ನಿರ್ವಹಿಸುವುದು.

**3.6.0 ಕೆ.ಆರ್.ಇ.ಡಿ.ಎಲ್ ಪಾತ್ರ :–**

ಕೆ.ಆರ್.ಇ.ಡಿ.ಎಲ್ ಸಂಸ್ಥೆಯು ಯೋಜನೆಯ ಆಡಳಿತ ನಿರ್ವಹಣೆಯನ್ನು ಈ ಕೆಳಕಂಡಂತೆ ಖಚಿತಪಡಿಸಿಕೊಳ್ಳುವುದು.

3.6.1 ಫಲಾನುಭವಿಗಳ ಆಯ್ಕೆಯನ್ನು, 4 ಕಂದಾಯ ವಿಭಾಗಗಳಲ್ಲಿನ ಆಯ್ದ ಜಿಲ್ಲೆಗಳ ಜಿಲ್ಲಾ ಪಂಚಾಯತ್‌ಗಳಲ್ಲಿ ಆರ್.ಡಿ.ಪಿ.ಆರ್ ಸಂಸ್ಥೆಯ ಸಮನ್ವಯದ ಮೂಲಕ ಗುರುತಿಸಲಾಗುವುದು.

3.6.2 ಕೆ.ಆರ್.ಇ.ಡಿ.ಎಲ್ ಸಂಸ್ಥೆಯು ಅನುಷ್ಠಾನಗೊಳಿಸುವ ಸಂಸ್ಥೆಯ ಕೆಲಸವನ್ನು ಪರಿವೀಕ್ಷಣೆ ಮತ್ತು ತಪಾಸಣೆ ಮಾಡುವುದು.

3.6.3 ಕೆ.ಆರ್.ಇ.ಡಿ.ಎಲ್ ಸಂಸ್ಥೆಯು, ಪ್ರಸ್ತಾವನೆಗಳನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ. ಸಹಾಯಧನ ಮಂಜೂರಾತಿ ನಂತರ, ಕೆ.ಆರ್.ಇ.ಡಿ.ಎಲ್ ಸಂಸ್ಥೆಯು ಟೆಂಡರ್ ಪ್ರಕ್ರಿಯೆ ಮೂಲಕ ಅನುಷ್ಠಾನಗೊಳಿಸುವ ಸಂಸ್ಥೆಯನ್ನು ಆಯ್ಕೆ ಮಾಡುವುದು. ಕೆ.ಆರ್.ಇ.ಡಿ.ಎಲ್ ಸಂಸ್ಥೆಯು ಕೆಲಸ ಪೂರ್ಣಗೊಂಡ ಮೇಲೆ ಸ್ಥಾವರ ತಪಾಸಣೆ ಮಾಡಿ ಸಹಾಯಧನವನ್ನು ಬಿಡುಗಡೆ ಮಾಡುವುದು.

ಈ ಯೋಜನೆಯನ್ನು ಕೆ.ಆರ್.ಇ.ಡಿ.ಎಲ್. ಸಂಸ್ಥೆಯ ಮುಖಾಂತರ ಅನುಷ್ಠಾನಗೊಳಿಸಲಾಗುವುದು. ನೇಮಿತ ಪ್ರತಿನಿಧಿಯಾದ ಕೆ.ಆರ್.ಇ.ಡಿ.ಎಲ್. ಸಂಸ್ಥೆಯಿಂದ ಯೋಜನೆಯ ಸಹಾಯಧನ ವಿತರಿಸಲಾಗುವುದು.

**3.7.0 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಾತ್ರ :–**

3.7.1 ಫಲಾನುಭವಿಗಳ ಆಯ್ಕೆ.

3.7.2 ಆರ್ಥಿಕವಾಗಿ ಹಿಂದುಳಿದ ಮತ್ತು ಬಡತನರೇಖೆಗಿಂತ ಕೆಳಗಿರುವ ಫಲಾನುಭವಿಗಳ ಮನೆಗಳನ್ನು ಆರ್.ಡಿ.ಪಿ.ಆರ್ ಸಂಸ್ಥೆಯ ಗ್ರಾಮಸಭಾ ಮತ್ತು ಪಂಚತಂತ್ರ ವರ್ಕ್‌ಸಾಫ್ಟ್ ಮುಖಾಂತರ ಗುರುತಿಸುವುದು.

3.7.3 ಫಲಾನುಭವಿಗಳ ಮನೆಗಳು, ದುರ್ಗಮ ಹಾಗೂ ಗುಡ್ಡಗಾಡು ಪ್ರದೇಶಗಳ ಮತ್ತು ವಿದ್ಯುತ್ ಸರಬರಾಜು ಇಲ್ಲದ ಗ್ರಾಮ/ಕೊಪ್ಪಲುಗಳ ಪ್ರದೇಶದಲ್ಲಿರಬೇಕು ಹಾಗೂ ವಿದ್ಯುತ್ ವಿತರಣಾ ಕಂಪನಿಗಳೊಂದಿಗೆ ಸಮನ್ವಯದೊಂದಿಗೆ ಗುರುತಿಸಲಾಗುವುದು.

3.7.4 ಫಲಾನುಭವಿಗಳ ಮನೆಗಳು ವಿದ್ಯುತ್ ಸರಬರಾಜು ಇಲ್ಲದ ಪ್ರದೇಶದಲ್ಲಿರಬೇಕು.

**3.8.0 ವಿದ್ಯುತ್ ವಿತರಣಾ ಕಂಪನಿಗಳ ಪಾತ್ರ :–**

3.8.1 ಫಲಾನುಭವಿಗಳ ವಂತಿಕೆಯನ್ನು ಸಂಗ್ರಹಿಸುವುದು.

3.8.2 ಸೌರಶಕ್ತಿ ಲಾಂದ್ರಗಳನ್ನು ವಿತರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

P.R: 71

## ಕಂದಾಯ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕಿನಲ್ಲಿ ಕರಾವಳಿ ಕುರುಬರ ಸಂಘ (ರಿ) ಮಂಗಳೂರು ಇವರಿಗೆ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಪತ್ರ ಸಂಖ್ಯೆ : ರೆಫ್ ಎಲ್‌ಎನ್ ಡಿ (1) ಪಿಡಿಆರ್/200/2012–13 (ಬಿ2) ಸಿ.ನಂ. 82785, ದಿನಾಂಕ : 15–11–2012.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಮೇಲೆ ಓದಲಾದ ದಿನಾಂಕ : 15–11–2012ರ ಪತ್ರದಲ್ಲಿ ಮಂಗಳೂರು ತಾಲ್ಲೂಕು, ಕದ್ರಿ ಗ್ರಾಮದ ಸ.ನಂ. 36/3ಎ1ಪಿ1 ರಲ್ಲಿ 0–23–ಸೆಂಟ್ಸ್ ಜಮೀನನ್ನು ಕನಕಭವನ ನಿರ್ಮಾಣಕ್ಕಾಗಿ ಕರಾವಳಿ ಕುರುಬರ ಸಂಘ (ರಿ) ಮಂಗಳೂರು ಇವರಿಗೆ ಮಂಜೂರು ಮಾಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2.ಜಿಲ್ಲಾಧಿಕಾರಿಗಳ ವರದಿಯನ್ವಯ ಮಂಗಳೂರು ತಾಲ್ಲೂಕು ಕದ್ರಿ ಗ್ರಾಮದ ಸ.ನಂ. 36/3ಎ1ಪಿ1ರ ಒಟ್ಟು ವಿಸ್ತೀರ್ಣ 0–32 ಎಕರೆ ಸರ್ಕಾರಿ ಬಾಗಾಯ್ತು ಎಂದು ಪಹಣಿಯಲ್ಲಿ ದಾಖಲಾಗಿರುತ್ತದೆ. ನಕ್ಷೆಯಲ್ಲಿ ಸ.ನಂ. 36/3ಎ1ಬಿ ಪೈಕಿ 0–23 ಎಕರೆ ಜಮೀನನ್ನು ಗುರುತಿಸಿದ್ದು, ಗುರುತಿಸಿರುವ ಜಮೀನು ಪೈಕಿ 0–03 ಎಕರೆ ಜಮೀನಿನಲ್ಲಿ ನಾಗರಕಟ್ಟೆ ಇರುತ್ತದೆ. 0–09 ಸೆಂಟ್ಸ್ ಜಮೀನನಲ್ಲಿ ಇತರೆಯವರು ಕಟ್ಟಿರುವ ಮನೆ ಹಾಗೂ ರಸ್ತೆಗಾಗಿ ಒತ್ತುವರಿ ಆಗಿರುತ್ತದೆಂದು ತಿಳಿಸಿರುತ್ತಾರೆ. ಅಂದರೆ ಸದರಿ ಸರ್ವೆ ನಂಬರ್‌ನಲ್ಲಿ 0–23 ಎಕರೆ ಮಾತ್ರ ಮಂಜೂರಾತಿಗೆ ಲಭ್ಯವಿರುತ್ತದೆ.

3. ಕರ್ನಾಟಕ ಭೂ ಮಂಜೂರಾತಿ ನಿಮಯಗಳ 1969ರ ನಿಯಮ 10(3) ರನ್ವಯ ಸರ್ಕಾರದ ಪೂರ್ವಾನುಮತಿ ಇಲ್ಲದೆಯೇ ಕೃಷಿಯೇತರ ಉದ್ದೇಶಕ್ಕಾಗಿ ನಗರ ವ್ಯಾಪ್ತಿಯಲ್ಲಿ ಜಮೀನನ್ನು ಮಂಜೂರು ಮಾಡಲು ಅವಕಾಶ ಇರುವುದಿಲ್ಲ.

4. ಜಿಲ್ಲಾಧಿಕಾರಿಗಳ ವರದಿಯನ್ವಯ ಸದರಿ ಜಮೀನು ಮಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಗೆ ಬರುತ್ತದೆ. ಪ್ರಸ್ತುತ ಜಮೀನಿನ ಬೆಲೆಯನ್ನು ಮಾರುಕಟ್ಟೆ ಅಂಕಿ ಅಂಶಗಳ ಆಧಾರದ ಮೇಲೆ ಪ್ರತಿ ಸೆಂಟ್‌ಗೆ ರೂ. 1,10,000–00 ನಿಗಧಿಪಡಿಸಬಹುದೆಂದು ವರದಿ ಮಾಡಿರುತ್ತಾರೆ.

ಮಹಾನಗರ ಪಾಲಿಕೆಯ ಮತ್ತು ನಗರ ಸಭೆಯ ವ್ಯಾಪ್ತಿಯಲ್ಲಿ ಬರುವ ಜಮೀನನ್ನು ಖಾಸಗಿ ವ್ಯಕ್ತಿಗಳಿಗೆ/ ಸಂಸ್ಥೆಗಳಿಗೆ ಮಂಜೂರು ಮಾಡಲು ಅವಕಾಶವಿರುವುದಿಲ್ಲ.

5. ಕರಾವಳಿ ಕುರುಬರ ಸಂಘ (ರಿ) ಮಂಗಳೂರು ನೋಂದಾಯಿತ ಸಂಸ್ಥೆಯಾಗಿದ್ದು, ಕಳೆದ ಐದು ವರ್ಷಗಳ ಅಡಿಟ್ ವರದಿ ಸಲ್ಲಿಸುತ್ತಾ ಕನಕ ಭವನ ನಿರ್ಮಾಣ ಮಾಡಲು ಕೋರುತ್ತಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 211 ಎಲ್‌ಜಿಎ 2012, ಬೆಂಗಳೂರು, ದಿನಾಂಕ : 28-12-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಗಳೂರು ತಾಲ್ಲೂಕಿನ ಕದ್ರಿ ಗ್ರಾಮದ ಸರ್ವೆ ನಂ. 36/3ಎ1 ಪಿ1 ರಲ್ಲಿ 0-23 ಎಕರೆ ಜಮೀನನ್ನು ಕರಾವಳಿ ಕುರುಬರ ಸಂಘ (ರಿ), ಮಂಗಳೂರು ಇವರಿಗೆ ಕನಕ ಭವನ ನಿರ್ಮಾಣ ಮಾಡಲು ಪ್ರಸಕ್ತ ಮಾರುಕಟ್ಟೆ ದರ ರೂ. 1,10,000/- ಒಂದು ಸೆಂಟಿಗೆ ಇದ್ದು ಇದರ ಮೇಲೆ ಪ್ರತಿ ಎರಡು ವರ್ಷಕ್ಕೊಮ್ಮೆ ಶೇ 10 ರಷ್ಟುನ್ನು ಹೆಚ್ಚಿಸುವ ಷರತ್ತುಗಳಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1966ರ ನಿಯಮ 19(1)ರನ್ವಯ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

1. ಮಂಜೂರಾತಿ ಆದೇಶದಲ್ಲಿ ಪ್ರಸ್ತಾಪಿತ ಭೂಮಿಯ ಪ್ರಚಲಿತ ಮಾರುಕಟ್ಟೆ ದರ/ಮಾರ್ಗಸೂಚಿ ದರವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
4. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
5. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
6. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
7. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
8. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
9. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂದಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
10. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗು ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
11. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಪ್ರಕಾಶ**

ಪೀಠಾಧಿಕಾರಿ (ಪ್ರ),

ಕಂದಾಯ ಇಲಾಖೆ (ಭೂ.ಮಂ-2).

**PR. 122**

**SC-35**

## ಕಂದಾಯ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು ಮೂಲ್ಕಿ ಬಪ್ಪ ನಾಡು ಗ್ರಾಮದ ಸ.ನಂ. 19/1 ರಲ್ಲಿ ಪರಿಶಿಷ್ಟ ಜಾತಿಯ (ಮುಂಡಾಲ) ಸಮುದಾಯ ಭವನದ ನಿರ್ವಾಣಕ್ಕೆ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರ ಪತ್ರ ಸಂಖ್ಯೆ : ರೆಫ್‌ಎಲ್‌ಎನ್‌ಡಿ (1) ಪಿಡಿಆರ್/340/12-13 (ಬಿ2)ಸಿ.ನಂ. 89965, ದಿನಾಂಕ : 11-02-2013.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಇವರು ದಿನಾಂಕ : 11-02-2013 ರ ಪತ್ರದಲ್ಲಿ ಪರಿಶಿಷ್ಟ ಜಾತಿಯ ಒಂಭತ್ತು ಮಾಗಾಣೆಯ ಮುಂಡಾಲ ಶಿವ ಸಮಾಜ ಸೇವಾ ಸಂಘ (ರಿ), ಗೇರುಕಟ್ಟೆ ಮುಲ್ಕಿ ಇವರು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕು ಮೂಲ್ಕಿ ಬಪ್ಪ ನಾಡು ಗ್ರಾಮದ ಸ.ನಂ. 19/1 ರಲ್ಲಿ 1-97 ಎಕರೆ ಖಾಲಿ ಜಮೀನಿನ ಅರ್ಧ ಭಾಗ ಅಥವಾ 50 ಸೆಂಟ್ಸ್ ಜಮೀನನ್ನು ಪರಿಶಿಷ್ಟ ಜಾತಿ (ಮುಂಡಾಲ) ಸಂಘಕ್ಕೆ ಸಮುದಾಯ ಭವನ ನಿರ್ಮಾಣ ಮಾಡಲು ಮಂಜೂರು ಮಾಡುವಂತೆ ಕೋರಿರುತ್ತಾರೆ.

2.ಜಿಲ್ಲಾಧಿಕಾರಿಗಳು ತಮ್ಮ ಪತ್ರದಲ್ಲಿ ಪ್ರಸ್ತಾವಿತ ಜಮೀನು ಬಪ್ಪನಾಡು ಗ್ರಾಮದ ಸ.ನಂ. 19/1 ರಲ್ಲಿ 1-97 ಎಕರೆ ಜಮೀನು ಸರ್ಕಾರ ಪೊರೋಂಬೊಕು ಲೋಕಲ್ ಫಂಡ ರಸ್ತೆ ಕಂದಾಯ ಇಲಾಖೆಯ ಕಟ್ಟಡ ರಚನೆಗಾಗಿ ಸಹಾಯಕ ಕಮೀಷರ್ ಆದೇಶ ಸಂಖ್ಯೆ : ಎಪಿಆರ್ 160/97-98

ದಿನಾಂಕ : 20–06–97 ರಲ್ಲಿ 1–97 ಎಕರೆ ಕಾದಿರಿಸಲಾಗಿದೆ ಆದರೆ ಈವರೆಗೆ ಉಪಯೋಗಿಸಿಕೊಳ್ಳದೇ ಖಾಲಿ ಇರುತ್ತದೆ. ಪ್ರಸ್ತಾಪಿತ ಸಂಘವು ಪರಿಶಿಷ್ಟ ಜಾತಿಯ ಸಮಾಜಕ್ಕೆ ಸಂಬಂಧಿಸಿದಂತೆ ಸಾಮಾಜಿಕ, ಶೈಕ್ಷಣಿಕ ಮತ್ತು ಧಾರ್ಮಿಕ ಹಲವಾರು ಅಭಿವೃದ್ಧಿ ಚಟುವಟಿಕೆಗಳಿಗೆ ನಡೆಸಿಕೊಂಡು ಬರುತ್ತಿದ್ದು ಈ ಉದ್ದೇಶಕ್ಕಾಗಿ ಕಂದಾಯ ಇಲಾಖೆಯ ಕಛೇರಿಯ ಕಟ್ಟಡಕ್ಕೆ ಕಾಯ್ದಿರಿಸಲಾಗಿರುವ 1–97 ಎಕರೆ ಜಮೀನಿನ ಪೈಕಿ ಅರ್ಧ ಭಾಗ ಅಥವಾ 50 ಸೆಂಟ್ಸ್ ಜಮೀನು ಸಮುದಾಯ ಭವನ ನಿರ್ಮಾಣ ಮಾಡಲು ಮಂಜೂರು ಮಾಡುವಂತೆ ಕೋರಿರುತ್ತಾರೆ.

3. ಸರ್ಕಾರವು ಮೇಲ್ಕಂಡ ಹಿನ್ನೆಲೆಯಂತೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 42 ಎಲ್‌ಜಿಎ 2013, ಬೆಂಗಳೂರು, ದಿನಾಂಕ : 18–12–2013**

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕು ಮುಲ್ಕಿ ಬಪ್ಪನಾಡು ಗ್ರಾಮದ ಸ.ನಂ. 19/1 ರಲ್ಲಿ ಮೀಸಲಿಟ್ಟ 1–97 ಎಕರೆ ಖಾಲಿ ಭೂಮಿಯಲ್ಲಿ 25 ಸೆಂಟ್ಸ್ ಜಮೀನನ್ನು ಪರಿಶಿಷ್ಟ ಜಾತಿಯ ಒಂಭತ್ತು ಮಾಗಾಣೆಯ ಮುಂಡಾಲ ಶಿವ ಸಮಾಜ ಸೇವಾ ಸಂಘ (ರಿ) ಗೇರುಕಟ್ಟೆ ಇವರಿಗೆ ಸಮುದಾಯ ಭವನ ನಿರ್ಮಾಣ ಮಾಡಲು 30 ವರ್ಷಗಳ ಅವಧಿಗೆ ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇ. 10% ರಷ್ಟನ್ನು ವಿಧಿಸಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 19(1)(ಎ) ಮತ್ತು 19(3) ರನ್ವಯ ಗುತ್ತಿಗೆ ದರವನ್ನು ಮಾರ್ಗಸೂಚಿ ಬೆಲೆಯ ಶೇ. 10% ರಷ್ಟು ಪ್ರತಿ ಎರಡು ವರ್ಷಗಳಿಗೊಮ್ಮೆ ಹೆಚ್ಚಿಸುವ ಷರತ್ತಿಗೊಳಪಡಿಸಿ ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

**ಷರತ್ತುಗಳು :–**

1. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂದಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಪ್ರಕಾಶ**

ಪೀಠಾಧಿಕಾರಿ (ಪ್ರ),

ಕಂದಾಯ ಇಲಾಖೆ (ಭೂ.ಮಂ–2).

PR. 123

SC-25

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀಮತಿ ಆರ್.ವೈ. ಕಾಂಬಳೆ, ಡಬ್ಲ್ಯೂ.ಹೆಚ್.ಸಿ.–1744, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ ಇವರ ಆದೇಶ ಸಂಖ್ಯೆ : ಸಿಬ್ಬಂದಿ 2/ ಇವಿ/26/2005 (ಆ. ಪು. ಸಂ. : 701/2006) ದಿನಾಂಕ : 30–11–2006.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ : ಅಪೀಲು/137/ಉವ/2007 ದಿನಾಂಕ : 28–04–2007.
3. ಅರ್ಜಿದಾರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 11–02–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)82/2012–13, ದಿನಾಂಕ : 06–08–2013.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 159 ಸಿಎನ್‌ಎಸ್ 2013,ದಿನಾಂಕ : 16–12–2013.

**ಪ್ರಸ್ತಾವನೆ :**

ಶ್ರೀಮತಿ ಆರ್.ವೈ. ಕಾಂಬಳೆ, ಡಬ್ಲ್ಯೂ.ಹೆಚ್.ಸಿ–1744, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ಕುಟುಂಬದವರೊಂದಿಗೆ ಸೇರಿ ಸೊಸೆಗೆ ಮಾನಸಿಕ ಹಾಗೂ ದೈಹಿಕ ಹಿಂಸೆ ನೀಡಿ ಆಕೆ ಆತ್ಮಹತ್ಯೆಗೆ ಕಾರಣರಾದ್ದರಿಂದ, ಇವರ ದುರ್ನಡತೆ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ :–**

"ಅಪಾದಿತ ಪೊಲೀಸ್ ಅಧಿಕಾರಿ ಡಬ್ಲ್ಯೂ.ಹೆಚ್.ಸಿ–1744 ರಂಜನಾ ವೈ. ಕಾಂಬಳೆ, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ರವರಾದ ನೀವು ನಿಮ್ಮ ಕುಟುಂಬದ ಸದಸ್ಯರಾದ ವಿಧ್ಯಾಸಾಗರ, ವಿಕ್ರಮ, (ಮಕ್ಕಳು) ಸಂಧ್ಯಾ (ಸೊಸೆ) ಕೂಡಿ ನಿಮ್ಮ ಸೊಸೆ ಬಬಿತಾ ಗಂಡ ವಿದ್ಯಾಸಾಗರ ಕಾಂಬಳೆ ಇವಳಿಗೆ ವಿನಾಕಾರಣವಾಗಿ ಮಾನಸಿಕ ಹಾಗೂ ದೈಹಿಕ ಚಿತ್ರಹಿಂಸೆ ಕೊಟ್ಟು ಸಂಸಾರಿಕ (Sexual) ತ್ರಾಸ ಕೊಟ್ಟು ಧಮಕಿ ಹಾಕಿ ಅವಳ ಮನನೋಯುವಂತೆ ಚುಚ್ಚಿ ಮಾತಾಡಿದ್ದರಿಂದ ಮಾನಸಿಕವಾಗಿ ಬೇಸತ್ತು, ನೊಂದುಕೊಂಡು ಕೊನೆಗೆ ದಿನಾಂಕ : 08–11–2005 ರಂದು 08–30ರ ಸುಮಾರಿಗೆ ಆತ್ಮಹತ್ಯೆ ಮಾಡಿಕೊಂಡಿದ್ದು ಈ ದುರ್ಘಟನೆಗೆ ನೀವೇ ಕಾರಣೀಭೂತರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ದೃಢಪಟ್ಟಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು. ಆದರೆ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 30–11–2006ರ ಆದೇಶದಲ್ಲಿ ಇವರ ವೇತನವನ್ನು ಡಬ್ಲ್ಯೂ.ಹೆಚ್.ಸಿ. ಹುದ್ದೆಯ ಕನಿಷ್ಟ ಮೂಲ ವೇತನಕ್ಕೆ ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸಿ, ಸದರಿಯವರಿಗೆ ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವಂತೆ ಹಾಗೂ ಸದರಿಯವರು ದಿನಾಂಕ : 08–11–2005 ರಿಂದ 30–01–2006 ರವರೆಗೆ ಸೇವೆಯಿಂದ ಅಮಾನತ್ತುನಲ್ಲಿದ್ದ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಿ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 28–04–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಸಲ್ಲಿಸಿರುವ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಆದರೆ ಶಿಸ್ತು ಪ್ರಾಧಿಕಾರವು ಇವರ ವೇತನವನ್ನು ಮಹಿಳಾ ಹೆಚ್.ಸಿ. ಹುದ್ದೆಯ ಕನಿಷ್ಟ ಮೂಲ ವೇತನಕ್ಕೆ ಇಳಿಸಿ, ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸುವ ದಂಡನೆ ವಿಧಿಸಿದೆ. ಆದರೆ ಕೆ.ಸಿ.ಎಸ್.ಆರ್. ನಿಯಮ 59ರನ್ವಯ ಯಾವುದೇ ಅವಧಿಯನ್ನು ನಮೂದಿಸಿರುವುದಿಲ್ಲ. ಶಿಸ್ತು ಪ್ರಾಧಿಕಾರದ ದಂಡನಾದೇಶವು ತಾಂತ್ರಿಕ ದೋಷದಿಂದ ಕೂಡಿರುವ ಹಿನ್ನೆಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 25 ಪೊಸಿಅ 2013, ಬೆಂಗಳೂರು, ದಿನಾಂಕ : 26–12–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಆರ್.ವೈ. ಕಾಂಬಳೆ, ಡಬ್ಲ್ಯೂಹೆಚ್.ಸಿ–1744, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರಿಗೆ ವಿಧಿಸಿದ ದಂಡನೆಯನ್ನು ಈ ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

(i) ಈ ದಂಡನೆಯು ಶಿಸ್ತು ಪ್ರಾಧಿಕಾರವು ದಂಡನೆ ವಿಧಿಸಿದ ದಿನಾಂಕ : 30–11–2006ರಿಂದ ಜಾರಿಗೆ ಬರುತ್ತದೆ.

(ii) ದಂಡನಾವಧಿಯು 30–11–2006 ರಿಂದ 29–11–2011 ರವರೆಗೆ ಐದು ವರ್ಷಗಳ ಅವಧಿಗೆ ಅನ್ವಯಿಸುತ್ತದೆ.

(iii) ಪೊಲೀಸ್ ಹೆಡ್ ಕಾನ್ಸಟೇಬಲ್ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ. 6,250–12,000/– ಆಗಿದ್ದು ಇವರ ವೇತನವನ್ನು ಸದರಿ ಹುದ್ದೆಯ ಕನಿಷ್ಟ ವೇತನ ರೂ. 6,250/–ಕ್ಕೆ (ದಿನಾಂಕ : 30–11–2006 ರಿಂದ ಜಾರಿಗೆ ಬರುವಂತೆ) ಐದು ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತವಾಗಿ (with cumulative effect) ವಾಗಿ ಇಳಿಸಿದೆ. ದಂಡನೆಯ ಅವಧಿಯಲ್ಲಿ ಇವರು ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲೀ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ. ಇವರ ವೇತನವು ಸ್ಥಿರವಾಗಿರುತ್ತದೆ.

(iv) ದಂಡನಾವಧಿ ಮುಗಿದ ನಂತರ ಇವರು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನದಿಂದ ಹೊಸದಾಗಿ ವೇತನ ಬಡ್ತಿಗಳನ್ನು ಪಡೆಯುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

PR. 52

SC-30

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆಯ ನವಲಗುಂದ ಕಂದಾಯ ತಾಲ್ಲೂಕಿಗೆ ಐದು ನೋಟರಿ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಲಾ 130 ಎಲ್‌ಸಿಎಲ್ 2011, ದಿನಾಂಕ : 20–01–2012.
2. ಸರ್ಕಾರದ ಪತ್ರ ಸಂಖ್ಯೆ : ಲಾ 130 ಎಲ್‌ಸಿಎಲ್ 2011, ದಿನಾಂಕ : 02–06–2012.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಜಿಲ್ಲೆ, ದಿನಾಂಕ : 08–08–2012.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ : 24–02–2009.
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009. ದಿನಾಂಕ : 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ : 23–07–2013.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 130 ಎಲ್‌ಸಿಎಲ್ 2011, ದಿನಾಂಕ : 28–09–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ದಿನಾಂಕ : 20–01–2012ರಲ್ಲಿ ಧಾರವಾಡ ಜಿಲ್ಲೆಯ ನವಲಗುಂದ ಕಂದಾಯ ತಾಲ್ಲೂಕಿಗೆ ಐದು ನೋಟರಿ ಹುದ್ದೆಗಳನ್ನು ಸೃಜಿಸಿದ್ದು. ಅದರಂತೆ, ಓದಲಾದ (2)ರ ಸರ್ಕಾರದ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮ 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಜಿಲ್ಲೆ ಇವರನ್ನು ದಿನಾಂಕ : 02–06–2012 ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರಲ್ಲಿ ದಿನಾಂಕ 08–08–2012ರ ಪ್ರಸ್ತಾವನೆಯೊಂದಿಗೆ 24 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ ದಿನಾಂಕ : 28–09–2013 ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲಾ 130 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 04–01–2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ (1) ಶ್ರೀ ಕಡೆಮನಿ ತುಳಸಪ್ಪ. ಟಿ. ವಕೀಲರು, ಸನ್ ಆಫ್ ತಿಮ್ಮಣ್ಣ, ಅಂಚೆ ಕಛೇರಿಯ ಹತ್ತಿರ, ಅಣ್ಣಿಗೇರಿ, ನವಲಗುಂದ ತಾಲ್ಲೂಕು–582201, ಧಾರವಾಡ ಜಿಲ್ಲೆ ಮತ್ತು (2) ಶ್ರೀ ಶ್ರೀಧರ್ ವಿ. ಸಂಗಮ್, ವಕೀಲರು, ಸನ್ ಆಫ್ ವೆಂಕಟರಾವ್ ಸಂಗಮ್, ಗ್ರಾಮ ದೇವಿ ದೇವಸ್ಥಾನದ ಹತ್ತಿರ, ನವಲಗುಂದ ತಾಲ್ಲೂಕು ಧಾರವಾಡ ಜಿಲ್ಲೆ–582208 (3) ಶ್ರೀ ಯಲ್ಲಪ್ಪ ಕುರಹಟ್ಟಿ, ವಕೀಲರು, ಸನ್ ಆಫ್ ಬಸಪ್ಪ ಕುರಹಟ್ಟಿ ನಡಾಫ್ ಬಿಲ್ಡಿಂಗ್, ಸಿವಿಲ್ ಕೋರ್ಟ್ ಎದುರು, ನವಲಗುಂದ–582 208, ಧಾರವಾಡ ಜಿಲ್ಲೆ (4) ಶ್ರೀ ನಡಾಫ್ ಹುಸೇನ್ ಮಬುಸಾಬ್, ವಕೀಲರು, ಸನ್ ಆಫ್ ನಡಾಫ್ ಮಬುಸಾಬ್, ಸಿಂಡಿಕೇಟ್ ಬ್ಯಾಂಕ್ ಎದುರು, ವಿನಾಯಕ್ ಪೇಟ್, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ–582208 ಮತ್ತು (5) ಶ್ರೀ ಸವದಿ ನಾಗಪ್ಪ, ವಕೀಲರು, ಸನ್ ಆಫ್ ಸವದಿ ಬಸಪ್ಪ, ಪಡೆಸೂರ್, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ–582 208 ಇವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ನವಲಗುಂದ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್. ಜಯರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

PR. 54

SC-25

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಅಥಣಿ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆ ತುಂಬುವ ಬಗ್ಗೆ (ಶ್ರೀ ಆರ್.ಎಸ್. ಪಾಟೀಲ್ ಇವರ ನಿಧನದಿಂದ ತೆರವಾದ ಹುದ್ದೆ).

**ಓದಲಾಗಿದೆ :**
1. ಅರೆ ಸರ್ಕಾರದ ಪತ್ರ ಸಂಖ್ಯೆ : ಲಾ 126 ಎಲ್‌ಸಿಎಲ್ 2010, ದಿನಾಂಕ : 03–03–2012.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ, ದಿನಾಂಕ : 14–03–2012.
3. ಸರ್ಕಾರದ ಪತ್ರ ಸಂಖ್ಯೆ : ಲಾ 126 ಎಲ್‌ಸಿಎಲ್ 2010, ದಿನಾಂಕ : 08–05–2012.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ, ದಿನಾಂಕ : 07–06–2013.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ : 24–02–2009.
6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009. ದಿನಾಂಕ : 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ : 23–07–2013.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 126 ಎಲ್‌ಸಿಎಲ್ 2010, ದಿನಾಂಕ : 28–09–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಶ್ರೀ ಆರ್.ಎಸ್. ಪಾಟೀಲ್, ನೋಟರಿ ಅಥಣಿ ಕಂದಾಯ ತಾಲ್ಲೂಕು ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು, ಅದರಂತೆ, ಓದಲಾದ (2)ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರು ಸದರಿ ನಿಧನ ಹೊಂದಿರುವ ನೋಟರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ, ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರನ್ನು ದಿನಾಂಕ : 08–05–2012 ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (4)ರಲ್ಲಿ ದಿನಾಂಕ 07–06–2013ರ ಪ್ರಸ್ತಾವನೆಯೊಂದಿಗೆ 19 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ : 28–09–2013 ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲಾ 126 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 31–12–2013**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಪರಗೌಡ ಬಸಗೌಡ ಪಾಟೀಲ್, ವಕೀಲರು, ಸನ್ ಆಫ್ ಬಸಗೌಡ ಬಾಬಾಗೌಡ ಪಾಟೀಲ, ಅಂಬಾಭವಾನಿ ದೇವಸ್ಥಾನದ ಹತ್ತಿರ, ಅಥಣಿ–591304, ಬೆಳಗಾವಿ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಅಥಣಿ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್. ಜಯರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**PR. 55**
**SC-25**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಕಂದಾಯ ತಾಲ್ಲೂಕಿನಲ್ಲಿ ತೆರವಾದ ಎರಡು ನೋಟರಿ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ : ಲಾ 126 ಎಲ್‌ಸಿಎಲ್ 2011, ದಿನಾಂಕ : 20–12–2012.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ, ದಿನಾಂಕ : 06–02–2013.
3. ಸರ್ಕಾರದ ಪತ್ರ ಸಂಖ್ಯೆ : ಲಾ 126 ಎಲ್‌ಸಿಎಲ್ 2011, ದಿನಾಂಕ : 18–06–2013.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ, ದಿನಾಂಕ : 19–07–2013.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ : 24–02–2009.

6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009. ದಿನಾಂಕ : 24-07-2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ : 23-07-2013.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 126 ಎಲ್‌ಸಿಎಲ್ 2011, ದಿನಾಂಕ : 28-09-2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅರೆ ಸರ್ಕಾರದ ಪತ್ರದಲ್ಲಿ ಶ್ರೀ ಜೆ.ಎಸ್. ಅಮ್ಮಣ್ಣವರ, ನೋಟರಿ ಹಾಗೂ ಆರ್.ಬಿ. ಕಮತೆ, ನೋಟರಿ, ಚಿಕ್ಕೋಡಿ ಕಂದಾಯ ತಾಲ್ಲೂಕು ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು, ಅದರಂತೆ, ಓದಲಾದ (2)ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರು ಸದರಿ ನಿಧನ ಹೊಂದಿರುವ ನೋಟರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ, ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರನ್ನು ದಿನಾಂಕ : 18-06-2013 ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (4)ರಲ್ಲಿ ದಿನಾಂಕ 19-07-2013ರ ಪ್ರಸ್ತಾವನೆಯೊಂದಿಗೆ 04 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ : 28-09-2013 ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲಾ 126 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 31-12-2013**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ವಿನೋದ್ ಬೈರೇಗೌಡ ಪಾಟೀಲ್, ವಕೀಲರು, ಸನ್ ಆಫ್ ಬೈರೇಗೌಡ, ರತ್ನ ನಿವಾಸ್, ಇಂದಿರಾ ನಗರ, ಚಿಕ್ಕೋಡಿ ತಾಲ್ಲೂಕು-591201, ಬೆಳಗಾವಿ ಜಿಲ್ಲೆ ಮತ್ತು ಶ್ರೀ ಕೋಟೆಪ್ಪಗೋಳ ದುಂಡಪ್ಪ ರಾಮಪ್ಪ, ವಕೀಲರು, ಸನ್ ಆಫ್ ಕೋಟಪ್ಪಗೋಳ ರಾಮಪ್ಪ ಹನುಮಂತ, ನಾಗರಮುನ್ನೋಳಿ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ-591 222 ಇವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿಕ್ಕೋಡಿ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000-00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 56

SC-25

**ಹೆಚ್.ಎಸ್. ಜಯರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆ ತುಂಬುವ ಬಗ್ಗೆ (ಶ್ರೀ ಎನ್.ಎನ್. ನಾಯ್ಕ ರವರ ನಿಧನದಿಂದ ತೆರವಾದ ಹುದ್ದೆ).

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ. ದಿನಾಂಕ : 16-09-2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 163 ಎಲ್‌ಸಿಎಲ್ 2010, ದಿನಾಂಕ : 21-10-2011, 07-07-2012 ಮತ್ತು 03-08-2012.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ, ದಿನಾಂಕ : 28-07-2012.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114(ಎ) ದಿನಾಂಕ : 24-02-2009.
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009. ದಿನಾಂಕ : 24-07-2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ : 23-07-2013.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 163 ಎಲ್‌ಸಿಎಲ್ 2010, ದಿನಾಂಕ : 28-09-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು ತಮ್ಮ ಪ್ರಸ್ತಾವನೆಯಲ್ಲಿ ಶ್ರೀ ಎನ್.ಎನ್. ನಾಯ್ಕ ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ. ಅದರಂತೆ, ಓದಲಾದ (2)ರ ಸರ್ಕಾರಿ ಪತ್ರಗಳು ದಿನಾಂಕ : 21–10–2011 ಮತ್ತು 07–07–2012 ಹಾಗೂ ಅರೆ ಸರ್ಕಾರಿ ಪತ್ರಗಳಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರಲ್ಲಿ ದಿನಾಂಕ 28–07–2012ರ ಪ್ರಸ್ತಾವನೆಯೊಂದಿಗೆ 10 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ ದಿನಾಂಕ : 28–09–2013 ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲಾ 163 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 07–01–2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ನಾಗರಾಜ್ ಮಂಜುನಾಥ್ ಹೆಗಡೆ, ವಕೀಲರು, ಸನ್ ಆಫ್ ಶ್ರೀ ಮಂಜುನಾಥ್ ಹೆಗಡೆ, ಮಾರುಕೇರಿ ಅಂಚೆ, ಭಟ್ಕಳ ತಾಲ್ಲೂಕು, ಕಾರವಾರ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಭಟ್ಕಳ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 57

SC-25

**ಹೆಚ್.ಎಸ್. ಜಯರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಕರ್ನಾಟಕ ಧಾರಣೀಯ (Affordable) ವಸತಿ ನೀತಿ–2013 ಅನ್ನು ರೂಪಿಸುವ ಕುರಿತು.

**ಪ್ರಸ್ತಾವನೆ:**

ಮನುಷ್ಯನಿಗೆ ಅನ್ನ ಮತ್ತು ಬಟ್ಟೆಯ ತರುವಾಯ ವಸತಿಯು ಮೂಲಭೂತ ಅಗತ್ಯವಾಗಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನದೇ ಆದ ಸ್ವಂತ ಮನೆಯನ್ನು ಹೊಂದುವ ಕನಸನ್ನು ಹೊಂದಿರುತ್ತಾನೆ ಮತ್ತು ಈ ಕನಸನ್ನು ನನಸು ಮಾಡಿಕೊಳ್ಳಲು ಎಲ್ಲಾ ಪ್ರಯತ್ನಗಳನ್ನು ಮಾಡುತ್ತಾನೆ. ಜನತೆಯ ಆಶೋತ್ತರಗಳನ್ನು ಗ್ರಹಿಸಿ, ಕರ್ನಾಟಕ ಸರ್ಕಾರವು ಭಾರತ ಸರ್ಕಾರದ ನೆರವಿನೊಂದಿಗೆ ವಸತಿ ವಲಯಕ್ಕೆ ಅತಿ ಹೆಚ್ಚಿನ ಆದ್ಯತೆಯನ್ನು ನೀಡಿರುತ್ತದೆ. ನಿವೇಶನದ ಬೆಲೆಯಲ್ಲಿ ಅತಿಯಾದ ಹೆಚ್ಚಳವು ಶ್ರೀಸಾಮಾನ್ಯನ ಕನಸನ್ನು ನನಸು ಮಾಡಿಕೊಳ್ಳುವಲ್ಲಿ ಒಂದು ತಡೆಗೋಡೆಯಾಗಿರುತ್ತದೆ. ವಸತಿರಹಿತ ಜನರ ಸಂಖ್ಯೆಯ ಅಪಾಯಕಾರಿ ಏರಿಕೆಯು, ಸರ್ಕಾರವು ವಾಸ್ತವದಲ್ಲಿ ಧಾರಣೀಯ (Affordable) ಮನೆಗಳು ಲಭ್ಯವಾಗುವಂತೆ ಮಾಡಲು ಕ್ರಮ ಕೈಗೊಳ್ಳುವಂತೆ ಮಾಡಿದೆ. ಕರ್ನಾಟಕದ ನಗರ ಪ್ರದೇಶಗಳಲ್ಲಿ ಮನೆಗಳ ಲಭ್ಯತೆ ಮತ್ತು ಅವುಗಳಿಗಾಗಿನ ಬೇಡಿಕೆಯ ನಡುವೆ ಅಗಾಧವಾದ ಅಂತರವಿರುತ್ತದೆ. ಆರ್ಥಿಕವಾಗಿ ದುರ್ಬಲ ವರ್ಗ (ಇಡಬ್ಲ್ಯೂಎಸ್) ಹಾಗೂ ಕಡಿಮೆ ಆದಾಯದ ಗುಂಪಿಗೆ (ಎಲ್‌ಐಜಿ) ಸೇರಿದ ಜನರಿಗೆ ನಿವೇಶನ, ಕಟ್ಟಡ ಸಾಮಗ್ರಿಗಳು ಹಾಗೂ ಕೆಲಸಗಾರರ ವೆಚ್ಚದಲ್ಲಿ ಉಂಟಾದ ಏರಿಕೆಯು ಬಲವಾದ ಹೊಡೆತವಾಗಿದೆ. ಧಾರಣೀಯ (Affordable) ವಸತಿಯ ಕೊರತೆಯು ಸರ್ಕಾರಕ್ಕೆ ಒಂದು ಪ್ರಮುಖ ಸವಾಲಾಗಿದೆ. ಹಾಗಾಗಿ ಈ ಸಮಸ್ಯೆಯನ್ನು ನಿಭಾಯಿಸಲು ಸರ್ಕಾರವು ಪೂರ್ವಸಿದ್ಧತಾ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ, ಹೊಸ ವಸತಿ ನೀತಿಯಡಿಯಲ್ಲಿ ಕಡಿಮೆ ಆದಾಯದ ಜನಸಮೂಹಕ್ಕೆ ಅನುಕೂಲವಾಗುವ ವಸತಿ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜಿಸಲಾಗಿದೆ. ಈ ಮೇರೆಗೆ ಏಪ್ರಿಲ್ 2009 ಭಾರತ ಸರ್ಕಾರದ ಮಾರ್ಗಸೂಚಿಗಳು ಹಾಗೂ 2013ರ ಸೆಪ್ಟೆಂಬರ್‌ನಲ್ಲಿನ ಸೂತ್ರಗಳಿಗನುಸಾರ ವಿಶೇಷವಾಗಿ ಆರ್ಥಿಕವಾಗಿ ದುರ್ಬಲ ವರ್ಗ(ಇಡಬ್ಲ್ಯೂಎಸ್) ಹಾಗೂ ಕಡಿಮೆ ಆದಾಯದ ಗುಂಪಿನ (ಎಲ್‌ಐಜಿ) ಪ್ರವರ್ಗಗಳಿಗಾಗಿ ಧಾರಣೀಯ (Affordable) ವಸತಿ ಸಮುಚ್ಚಯವನ್ನು ಹೆಚ್ಚಿಸುವ ಧಾರಣೀಯ (Affordable) ವಸತಿ ನೀತಿಯನ್ನು ರೂಪಿಸಲು ಉದ್ದೇಶಿಸಿದೆ. ಈ ಕಾರ್ಯನೀತಿಯು ಎಲ್ಲರೂ ವಸತಿ ಹೊಂದುವ ಗುರಿಯನ್ನು ಸಾಕಾರಗೊಳಿಸಲು ವಿವಿಧ ಸರ್ಕಾರಿ, ಖಾಸಗಿ ಸಹಭಾಗಿತ್ವಗಳ ಮಾದರಿಗಳನ್ನು ಉತ್ತೇಜಿಸಿ, ರಾಷ್ಟ್ರೀಯ ನಗರ ವಸತಿ ಮತ್ತು ವಾಸಸ್ಥಳ ಕಾರ್ಯನೀತಿ (NUHHP) 2007ರಲ್ಲಿ ಯೋಜಿಸಲಾದ ವಿಧಾನವನ್ನು ಕಾರ್ಯಗತಗೊಳಿಸಲು ನೆರವಾಗುವುದು. ನಗರ ವಲಯದಲ್ಲಿ ವಸತಿ ಕೊರತೆಯು ತೀವ್ರವಾಗಿದೆ. ಇಡಬ್ಲ್ಯೂಎಸ್/ಎಲ್‌ಐಜಿ ಪ್ರವರ್ಗದಲ್ಲಿ ಇದು ಇನ್ನಷ್ಟು ಹೆಚ್ಚಾಗಿದೆ. ಆದುದರಿಂದ, ರಾಜ್ಯ ಸರ್ಕಾರದ ಕಾರ್ಯಭಾರ ಹಾಗೂ ಮಧ್ಯಪ್ರವೇಶವು ಅತ್ಯಂತ ಪ್ರಮುಖವಾಗಿರುತ್ತದೆ.

ಆದುದರಿಂದ, ವಸತಿ ಕೊರತೆಯನ್ನು ನೀಗಿಸಲು ಸರ್ಕಾರಿ ಏಜೆನ್ಸಿಗಳೊಂದಿಗೆ ಕಾರ್ಯನಿರ್ವಹಿಸಲು ಸೂಕ್ತ ಪ್ರೋತ್ಸಾಹಗಳನ್ನು ನೀಡುವ ಮೂಲಕ ಖಾಸಗಿ ಡೆವಲಪರ್‌ಗಳನ್ನು ಆಹ್ವಾನಿಸಲು ಉದ್ದೇಶಿಸಲಾಗಿದೆ. ಪ್ರೋತ್ಸಾಹಕಗಳ ವಿವಿಧ ಬಗೆಗಳು ಹಾಗೂ ಶೀಘ್ರವಾಗಿ ಅನುಮೋದನೆ ಪ್ರಕ್ರಿಯೆಯಿಂದಾಗಿ ಈ ವಲಯಕ್ಕೆ ಖಾಸಗಿ ಹೂಡಿಕೆಗಳನ್ನು ಆಕರ್ಷಿಸಲಾಗುವುದು. ಇದು ಬೇಡಿಕೆ ಹಾಗೂ ಪೂರೈಕೆ ನಡುವಿನ ಅಂತರವನ್ನು ಕಡಿಮೆ ಮಾಡಬಹುದಾಗಿದ್ದು, ಇದರಿಂದಾಗಿ ವಸತಿ ರಹಿತ ಜನರಿಗೆ ಮುಂದಿನ ವರ್ಷಗಳಲ್ಲಿ ಹೆಚ್ಚಿನ ಮಟ್ಟದಲ್ಲಿ ವಸತಿಗಳನ್ನು ಒದಗಿಸಬಹುದು. ಇಡಬ್ಲ್ಯೂಎಸ್/ಎಲ್‌ಐಜಿ ಪ್ರವರ್ಗದ ಜನರಿಗೆ ಮನೆಗಳನ್ನು ಒದಗಿಸುವಲ್ಲಿ ಅತಿ ಕಡಿಮೆ ಸ್ಟ್ಯಾಂಪ್ ಸುಂಕವನ್ನು ವಿಧಿಸಿ ಪ್ರೋತ್ಸಾಹವನ್ನು ನೀಡಲು ಕರ್ನಾಟಕ ಸರ್ಕಾರವು ಉದ್ದೇಶಿಸಿರುತ್ತದೆ. ಇದು ಮನೆಗಳ ವೆಚ್ಚವನ್ನು ಇಳಿಸುವಲ್ಲಿ ಸಹಕಾರಿಯಾಗುತ್ತದೆ ಮತ್ತು ಈ ವಲಯದಲ್ಲಿ ಅಭಿವೃದ್ಧಿಯ ಹೆಜ್ಜೆಯನ್ನು ತ್ವರಿತಗೊಳಿಸುವುದಾಗಿರುತ್ತದೆ. ಧಾರಣೀಯ (Affordable) ವಸತಿಯ ಗುರಿಯನ್ನು ಸಾಕಾರಗೊಳಿಸಲು ನಗರಾಭಿವೃದ್ಧಿ ಪ್ರಾಧಿಕಾರಗಳನ್ನು ಒಳಗೊಂಡಂತೆ ಖಾಸಗಿ ವಲಯ, ಸಹಕಾರಿ ವಲಯ, ಆರ್ಥಿಕ ಸೇವೆಗಳ ವಲಯವು ಸೇರಿದಂತೆ ಸಾರ್ವಜನಿಕ–ಖಾಸಗಿ ಸಹಭಾಗಿತ್ವದ ವಿವಿಧ ಬಗೆಗಳನ್ನು ಉತ್ತೇಜಿಸುವುದು ಇದರ ಗುರಿಯಾಗಿರುತ್ತದೆ. ಇದು ನಿರ್ಮಾಣ ಕೆಲಸಗಾರರನ್ನೂ ಒಳಗೊಂಡಂತೆ ನಗರದ ಬಡವರಿಗೆ ಉದ್ಯೋಗವನ್ನು ಸೃಜಿಸಲು ಸಹಾಯಕವಾಗುತ್ತದೆ ಹಾಗೂ ಇತರೆ ವಲಯಗಳಲ್ಲೂ ಸಹ ಬೆಳವಣಿಗೆಯನ್ನು ಉಂಟುಮಾಡುತ್ತದೆ. ಧಾರಣೀಯ ವಸತಿಯನ್ನು ಉತ್ತೇಜಿಸಲು ಭಾರತ ಸರ್ಕಾರ ರಚಿಸಿದ ಟಾಸ್ಕ್ ಫೋರ್ಸ್, ರಾಷ್ಟ್ರೀಯ ಕಟ್ಟಡ ಸಂಹಿತೆಯ ಅನುಸಾರವಾಗಿ ವಾಸಯೋಗ್ಯ ಇಡಬ್ಲ್ಯೂಎಸ್/ಎಲ್‌ಐಜಿ ಯವರಿಗೆ ವಾಸದ ಮನೆಗಳ ಕನಿಷ್ಠ ವಿಸ್ತೀರ್ಣವನ್ನು ಶಿಫಾರಸ್ಸು ಮಾಡಿದ್ದು, ಇದು ಧಾರಣೀಯ (Affordable) ವಸತಿಯನ್ನು ವೃದ್ಧಿಸುತ್ತದೆ.

ಭಾರತ ಸರ್ಕಾರವು ಹೊರಡಿಸಿದ ಮಾರ್ಗಸೂಚಿಗಳಿಗನುಗುಣವಾಗಿ ಇಡಬ್ಲ್ಯೂಎಸ್ ಹಾಗೂ ಎಲ್‌ಐಜಿ ಪ್ರವರ್ಗಗಳಿಗಾಗಿ ಗರಿಷ್ಠ ಕುಟುಂಬದ ಆದಾಯವು ಕ್ರಮವಾಗಿ ತಿಂಗಳಿಗೆ 8,000/–ರೂಪಾಯಿಗಳು ಮತ್ತು 16,000/–ರೂಪಾಯಿಗಳು. ಆದಾಗ್ಯೂ ಇಡಬ್ಲ್ಯೂಎಸ್/ಎಲ್‌ಐಜಿ ಅಡಿಯಲ್ಲಿ ಬರುವ ಅನೇಕ ಕುಟುಂಬಗಳು ನಿಯಮಿತ ಮಾಸಿಕ ಆದಾಯವನ್ನು ಹೊಂದಿಲ್ಲವೆಂಬ ಅಂಶವನ್ನು ಪರಿಗಣಿಸಿ ಇಡಬ್ಲ್ಯೂಎಸ್‌ಗಳಿಗೆ ರೂ.1.00ಲಕ್ಷಗಳ ಮತ್ತು ಎಲ್‌ಐಜಿಗಳಿಗೆ ರೂ.2.00ಲಕ್ಷಗಳ ವಾರ್ಷಿಕ ಆದಾಯವನ್ನು ನಿಗದಿಪಡಿಸಲಾಗಿದೆ. ಬೆಂಗಳೂರು ಮೆಟ್ರೋಪಾಲಿಟನ್ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿ ಇಡಬ್ಲ್ಯೂಎಸ್ ಮತ್ತು ಎಲ್‌ಐಜಿ ಪ್ರವರ್ಗಗಳಿಗೆ ನಿಗದಿಪಡಿಸಿದ ಮಿತಿಗಳನ್ನು ವಾರ್ಷಿಕವಾಗಿ ಗರಿಷ್ಠ ಶೇ.20ರಷ್ಟು ಹೆಚ್ಚಿಸಲು ಪರಿಗಣಿಸಬಹುದು. ಧಾರಣೀಯ (Affordable) ವಸತಿ ಪದವು ಇಡಬ್ಲ್ಯೂಎಸ್ ಮತ್ತು ಎಲ್‌ಐಜಿ ಪ್ರವರ್ಗದ ಜನರಿಗೆ ನ್ಯಾಯಯುತ ಬೆಲೆಗಳಲ್ಲಿ ವಸತಿಗಳು ದೊರೆಯುವುದನ್ನು ಸೂಚಿಸುತ್ತದೆ. ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್) ಕುಟುಂಬಗಳಿಗೆ ವಸತಿಗಳನ್ನು ಒದಗಿಸುವ ಕಾರ್ಯದಲ್ಲಿ ನಮ್ಮ ರಾಜ್ಯವು ಮುಂಚೂಣಿಯಲ್ಲಿದೆ. ಹೆಚ್ಚಿನ ಸಂಖ್ಯೆಯ ಎಲ್‌ಐಜಿ ಕುಟುಂಬಗಳಿಗೂ ಸಹ ವಸತಿಗಳ ಅಗತ್ಯವಿರುತ್ತದೆ. ಸಮಾಜದ ಎಲ್ಲಾ ವರ್ಗಗಳಿಗೂ ಧಾರಣೀಯ (Affordable) ಬೆಲೆಗಳಲ್ಲಿ ನಿವೇಶನ, ಮನೆ ಮತ್ತು ಸೇವೆಗಳನ್ನು ನ್ಯಾಯಯುತವಾಗಿ ಒದಗಿಸುವುದನ್ನೂ ಖಚಿತಪಡಿಸುವುದು ಇದರ ಮೂಲ ಪರಿಕಲ್ಪನೆಯಾಗಿರುತ್ತದೆ. ಕರ್ನಾಟಕ ಸರ್ಕಾರವು ಹೊಸ ಕೊಳಚೆ ಪ್ರದೇಶಗಳು ಸೃಷ್ಟಿಯಾಗುವ ಅಥವಾ ಸರ್ಕಾರಿ ಜಾಗಗಳಲ್ಲಿ ಕಾನೂನುಬಾಹಿರ ನಿರ್ಮಾಣಗಳಿಗೆ ಕಾರಣವಾಗಬಹುದಾದಂತಹ ನಗರದ ಬಡವರಿಗೆ ತಲುಪಲಾಗದ ವಸತಿ ನಿವೇಶನಗಳು ಮತ್ತು ವಸತಿಗಳ ಕೊರತೆಯನ್ನು ನೀಗಿಸಲು ಧಾರಣೀಯ (Affordable) ವಸತಿಯ ಬಗೆಗೆ ಒಂದು ನೀತಿಯನ್ನು ರೂಪಿಸಲು ತೀರ್ಮಾನಿಸಿ, ಸದರಿ ನೀತಿಯನ್ನು ಅನುಷ್ಠಾನಗೊಳಿಸುವ ಬಗ್ಗೆ ಆರ್ಥಿಕ ಇಲಾಖೆ, ನಗರಾಭಿವೃದ್ಧಿ ಇಲಾಖೆ, ಇಂಧನ ಇಲಾಖೆ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಕಂದಾಯ ಇಲಾಖೆ, ಕಾರ್ಮಿಕ ಇಲಾಖೆ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆ ಮತ್ತು ಅಗ್ನಿಶಾಮಕ ಇಲಾಖೆಗಳ ಅಭಿಪ್ರಾಯಗಳನ್ನು ಪಡೆದು, ಸದರಿ ಇಲಾಖೆಗಳು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಉದ್ದೇಶಿತ ನೀತಿಯಲ್ಲಿ ಕಾರ್ಯಸಾಧ್ಯವಿರುವಷ್ಟು ಅಳವಡಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ 49 ಕಗೃಮಂ 2013, ಬೆಂಗಳೂರು, ದಿನಾಂಕ:28–10–2013.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕದ ಧಾರಣೀಯ (Affordable) ವಸತಿ ನೀತಿ–2013ನ್ನು ಅನುಬಂಧದಲ್ಲಿ ತಿಳಿಸಿರುವಂತೆ ರೂಪಿಸಲಾಗಿದೆ. ಸದರಿ ನೀತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅನುಷ್ಠಾನಗೊಳಿಸಲು ಆದೇಶಿಸಿದೆ.

ಈ ನೀತಿಯ ಪ್ರಕಾರ ಸಂಬಂಧಪಟ್ಟ ಇಲಾಖೆಗಳು ಸೂಕ್ತ ಆದೇಶಗಳನ್ನು ಹಾಗೂ ಅವಶ್ಯವಿದ್ದಕಡೆ ಇಲಾಖೆಯ ನಿಯಮ/ಕಾಯ್ದೆ/ ವಿಧೇಯಕಗಳಿಗೆ ಸೂಕ್ತ ತಿದ್ದುಪಡಿಗಳನ್ನು ತರತಕ್ಕದ್ದು.

ಈ ವಸತಿ ನೀತಿಯಲ್ಲಿ ಪ್ರಸ್ತಾಪಿಸಿರುವ ಆರ್ಥಿಕೇತರ ಪ್ರೋತ್ಸಾಹಕಗಳನ್ನು "ಸಕಾಲ" ಸೇವೆಯಡಿ ಸೇರಿಸಲು ಸಂಬಂಧಪಟ್ಟ ಇಲಾಖೆಗಳು ಕ್ರಮಕೈಗೊಳ್ಳತಕ್ಕದ್ದು.

ಕರ್ನಾಟಕ ಗೃಹ ಮಂಡಳಿಯು ಈ ಯೋಜನೆಯನ್ನು ಅನುಷ್ಠಾನಗೊಳಿಸುವ ರಾಜ್ಯ ಮಟ್ಟದ ನೋಡಲ್ ಏಜೆನ್ಸಿ (State Level Nodal Agency)ಯಾಗಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ. ಆಇ 362 ವೆಚ್ಚ–9/2013ರಲ್ಲಿ ದಿನಾಂಕ25.09.2013 ರಂದು ಮತ್ತು ನಗರಾಭಿವೃದ್ಧಿ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ: ನಅಇ 484 ಮೈಅಪ್ರಾ 2013 ರಲ್ಲಿ ದಿನಾಂಕ:07–10–2013 ರಂದು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ॥ ಇ.ವಿ.ರಮಣ ರೆಡ್ಡಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ವಸತಿ ಇಲಾಖೆ.

# ANNEXURE

## CHAPTER 1

### INTRODUCTION

**1.1** The Government of India has formulated Guidelines for the Scheme for Affordable Housing in Partnership which came into effect in April 2009. The same has been revised recently during September 2013. In keeping with the guidelines of the Government of India, the State Government of Karnataka intends to formulate an Affordable Housing Policy to augment affordable housing stock, particularly for Economically Weaker Section (EWS) and Lower Income Group (LIG) categories. The policy will help operationalise the strategy

envisaged in the National Urban Housing and Habitat Policy (NUHHP) 2007 of promoting various types of Public Private Partnerships (PPP) - of the Government sector with the Private sector, the State undertakings, Urban Local Bodies etc. - for realizing the goal of Affordable Housing for all. The basic aim of the policy is to increase affordable housing stock by encouraging affordable housing developers through incentives and concessions.

**1.2 Objectives:**

The policy shall have the following objectives:

(i) to reduce the housing shortage in the State, especially in EWS/LIG categories.
(ii) to facilitate large-scale construction of Affordable Housing, with main focus on EWS & LIG housing.
(iii) to bring down the cost of houses for EWS & LIG categories to affordable limits through cross-subsidisation
(iv) to promote investments in housing in Urban Sector by forging different types of partnerships with affordable housing developers in private sector.
(v) to involve private developers in the construction of houses for EWS/LIG categories by offering various financial and non-financial incentives
(vi) to create Rental Housing as transit accommodation for migrants to urban areas
(vii) to ensure fast-track approval to affordable housing projects.

**1.3 Sizes of EWS and LIG Dwelling Units (Carpet Area):**

To establish the minimum size of a habitable EWS / LIG dwelling unit (DUs), the absolute minimum size of areas as presented in the National Building Code and as recommended by Task Force on Promoting Affordable Housing of Government of India shall be followed. The dimensions of affordable housing dwelling units are as follows:

- For Economically Weaker Section (EWS): 21- 27sq.m Carpet Area
- For Lower Income Group (LIG-A): 28-40 sq.m Carpet Area
- For Upper Lower Income Group (LIG-B): 41-60 sq.m Carpet Area

The above ranges, especially if subsidies are tied to them, can have an admissible marginal variation of 10% While the minimum area of the EWS would be fixed at 21 sq.m, the maximum area for LIG B would be fixed at 60 sq.m. By applying 10% variation to upper limit of EWS dwelling unit, maximum area of EWS could be between 24.3 and 29.7 sq.m. Similarly the minimum area for LIG B could be between 36.9 and 45.1 sq.m. after applying 10% variation on the lower limit. The maximum permissible loading of 25% on carpet area to calculate Built-up Area and 40% to calculate Super-built-up (Saleable) area are permitted,

**1.4 Income criteria based on Income ceiling of households:**

Maximum Household Income for the EWS and LIG categories are Rs. 8,000/- and Rs 16,000/¬per month respectively. However, Since many households in this category do not have regular monthly income, an annual income of upto Rs. 1,00,000 for EWS and upto Rs. 2,00,000 for LIG households are considered as suggested by the Task Force on promoting Affordable Housing of Government of India. For Bangalore metropolitan city an increase upto a maximum of 20 percent on the annual income levels mentioned above is allowed.

## CHAPTER 2

### MODELS OF AFFORDABLE HOUSING

**Following models for development of Affordable Housing are proposed for implementation in the State.**

**Model no. 1**

**2.1 Private Developers on their own land (with incentives to offset land cost for EWS/LIG)**

- Private Developer shall take up construction of EWS/LIG dwelling units (DUs) on minimum 40% of land in their project. The developer is free to construct houses for other categories including using a portion of land for commercial purposes.
- The dwelling units under EWS/LIG category will be handed over to Karnataka Housing Board (KHB) at a mutually agreed pre-determined price for allotment to eligible applicants. Maximum subsidy available under affordable housing in partnership scheme of Government of India / incentives offered by the State Government to be considered while determining the prices.
- Developer will be free to sell the remaining portion as per his choice at such price as may be determined by him.
- Land used by the Developer for EWS/LIG, will be eligible, upto that extent, for double the normal FAR.
- The additional FAR if not utilized for the same project, will be allowed as TDR for other projects.
- All internal development works such as roads, footpaths, water supply, UGD, electrical wirings, parks and street lights will be undertaken by the Developer.
- Provision shall also be made for civic amenities such as school/ clinic/creche/neighbourhood shops etc. and affordable housing developers will be allowed to plan and develop Civic Amenity (CA) area simultaneously for provision of these civic amenities.
- Rain water harvesting structures and sewerage treatment plants are mandatory as per norms.
- EWS/LIG flats should be in G+ 3 format.

**Model No. 2**

**2.2.1 Karnataka Housing Board (KHB)**

- KHB will construct at least 50% houses / flats of EWS / LIG category in each of their housing schemes.
- Government land shall be allotted on priority to KHB.
- KHB shall also take up EWS/LIG flats on PPP model and will select PPP partner by following a transparent process. Modalities set forth by the Department of Infrastructure Development may be followed in this regard.
- KHB shall cross-subsidize the land cost of EWS / LIG houses so as to bring down the costs of these categories of houses to affordable limits.
- KHB may adopt fast track and efficient construction technology.
- Land used for EWS/LIG will be eligible, upto that extent, for double the normal FAR.

**2.2.2 Development Authorities and Urban Local Bodies:-**

- Development Authorities and Urban Local Bodies will allot / construct at least 30% plots / houses / flats / for EWS / LIG housing in each of their residential / housing schemes.
- Government land shall be allotted on priority to these agencies.
- These agencies shall also take up EWS / LIG housing on PPP model. These agencies shall cross-subsidize the land cost of EWS / LIG houses, so as to bring down the cost of these categories of houses to affordable limits. PPP partner will be selected through a transparent process. Modalities set-forth by Department of Infrastructure Development may be followed in this regard.
- Land used for EWS / LIG will be eligible, upto that extent, for double the normal FAR.

**2.2.3 Private Developers (Townships and Group Housing Schemes):-**

- At least 15% of the dwelling units / plots (or 5% of the total residential area of the scheme, whichever is higher) are to be earmarked for EWS/LIG housing (G+3 format) in each of the private township and group housing schemes. The Developer has the option to develop only EWS dwelling units / plots in lieu of LIG.
- Private Developers could also purchase EWS/LIG units in lieu of construction of required number of EWS/LIG units in their projects from certified Affordable Housing Projects. This would be like TDRs that allow Developers to build in more FSI/FAR. On the same analogy, mainstream Developers could purchase AFFORDABLE HOUSING RIGHTS (AHRs) from certified Affordable Housing Projects developed by Affordable Housing Developers to fulfill their reservation requirements. However, certified Affordable Housing Project in which AHRs are purchased must be within the same jurisdiction of Local Planning Authority under which mainstream Developer has developed his project for which he buys AHRs. There could be pooling of AHRs by different mainstream Developers so that they can together meet their reservation requirements. The AHRs will be allowed only for projects that are certified by the State Government as affordable housing projects, and are eligible to get concessions/incentives granted by the State Government. The Karnataka Housing Board will work out an institutional mechanism for the same.

**Model no. 3**

**2.3.1 Private developer on acquired land**

- This model is meant for undertaking affordable housing on land acquired by KHB/ULB/UDA and offered to Affordable Housing Developers for construction of EWS/LIG dwelling units in (G+3 format), houses for other categories, commercial buildings, civic amenities etc., as per existing byelaws.
- KHB/ULB/UDA will identify private land for acquisition for which cost of acquisition + 10% shall be payable by the affordable housing Developer.
- Private developer shall deposit the cost of acquisition together with 10% services charges to KHB/ULB/UDA to facilitate acquisition process. Such amount of land and timelines to acquire shall be mutually agreed and approved by KHB/ULB/UDA. Any funds unutilized shall be returned to the Developer within 30 days from the completion of such land procurement and in case any surplus funds are required, the same needs to be deposited by the developer.
- Developers to take up construction of EWS/LIG DUs in 50% of the total area and the balance 50% can be developed for construction of houses for higher categories, commercial buildings, etc.
- Selection will be made through a bidding process and the one who quotes the maximum number of EWS / LIG units to be surrendered free of cost to the respective ULBs / UDAs /KHB would be considered.
- External development charges shall be borne by the respective ULBs / UDAs/KHB.
- All internal developments such as roads, footpaths, water supply, electrical wiring, parks, street lights etc. shall be provided by the Developer.

- Provision shall be made for civic amenities such as school / clinic / neighbourhood shops etc. and for this purpose the Developer will be allowed to plan and develop CA area simultaneously
- The extent of land used by the Developer for EWS/LIG categories, being not less than 50% of the total land area of the project, will be eligible for double the normal FAR.
- The additional FAR if not utilized for the same project, will be allowed as TDR for other projects.

**Model No. 4**

**2.4.1 Housing for Industrial workers**

- KIADB / KSSIDC / Labour Department shall act as nodal agency for providing houses to industrial workers working in the industrial estates.
- While forming industrial estates 25% of the land acquired shall be reserved for development of residential layouts for workers working in industries located in such industrial estates / nearby industrial estates.
- Subsidies and benefits provided to EWS and LIG category are also applicable to industrial workers.
- The dwelling units will be handed over at a pre-determined price to KIADB/KSSIDC/Labour Department and allotments will be made by KIADB / KSSIDC / Labour Department in accordance with the allotment rules and regulations framed by them.

**Model No.5**

**2.5.1 Labour Housing**

- Workmen in construction sites / industrial areas live in unhygienic conditions with inadequate housing and basic amenities.
- There is an imminent need for decent housing.
- Industrialists, construction companies and employers will ensure provision of housing for labourers engaged by them during construction. They may also make use of transit accommodation constructed by Labour Department, for this purpose.
- KSSIDC / KIADB / Labour department as the case may be will act as nodal agency on behalf of the employers. These will be located close to the place of work and employer will maintain the DUs and provide all facilities.
- Employers will provide these houses to employees / workmen either on free of cost basis or at a nominal rent basis as per the terms of engagement.
- Karnataka Construction Workers Board shall provide transit accommodation for construction workers in all the District Headquarters.

## CHAPTER - 3

## PROCEDURES AND GENERAL GUIDELINES

**3.1 Eligibility criteria for affordable housing Developer**

Any Developer fulfilling the following criteria will be eligible to apply:

(i) has experience in building construction works for at least three years and should have a good track record of quality construction work.

(ii) total net worth (Reserve & Capital) of last three years (of the company or its sister concern or consortium) should be equivalent to at least 10% of the project cost (excluding land cost) i.e. cost of proposed EWS/LIG houses.

(iii) the Developer should have executed minimum 2 acres of residential or other type of development in a single project during the last 3 years. (As a Developer or builder or as construction agency)

(iv) joint venture or Special Purpose Vehicle by private Developers will also be eligible under the Policy.

(v) for applying under Model No.1, the Developer should earmark at least 5.0 acres of land in the concerned town.

**3.2 Eligibility and other conditions for Beneficiaries/Applicants for allotment of EWS/LIG dwelling units: -**

(i) Monthly household income of the applicant for EWS and LIG categories shall be as mentioned at para 1.4 and as fixed by Government from time to time.

(ii) Income certificate to be certified by concerned employer in case of salaried individual & if the individual is self-employed the income certificate to be certified by Tahsildar or any other government official authorized by the State Government.

(iii) The applicant should not own any leasehold or freehold house or plot either in his own name or in the name of spouse or any dependent member (including unmarried children) of his family in any urban area of Karnataka. An affidavit certified by the Notary Public shall be submitted to this effect.

(iv) The dwelling unit allotted to beneficiary must be occupied within 3 months of taking over the possession of the same.

(v) The applicant must be a bona fide resident of the State of Karnataka. At the time of application, an affidavit to this effect may be submitted by him. However, at the time of enlistment in the eligibility list, he will have to submit bona fide certificate issued by the competent authority, otherwise his registration is liable to be cancelled. This condition will not be valid for housing projects for specific group of persons like industrial workers, mining workers etc. for whom a special housing complex could be constructed.

(vi) Every resident will have to become member of Residents Welfare Association (R W A) which will maintain common services and regular up-keep of housing property. An undertaking to this effect will have to be given by incumbent before possession is handed over to him.

(vii) Allottees of EWS/LIG dwelling units will not be allowed to sell or transfer flat/house for a period of 10 years and a condition to that effect will be incorporated in the sale deed at the time of registration.

**3.3 Selection of site, eligible Developers, approval & completion of project**

(i) KHB/ULB/UDA shall invite expression of interest (E0I) for construction of houses in various towns from interested Developers from all over the country.

(ii) After scrutinizing the proposals received from the private Developers, KHB/ULB/UDA shall place them before the State Level Monitoring Committee for recommendations.

(iii) The State Government based on recommendation of State Level Monitoring Committee would issue an in- principle approval for commencement of the project.

(iv) The private Developer shall, within 15 days from the date of in-principle approval given by the State Government, submit proposal to the concerned local authority for conversion of agriculture land under Karnataka Land Revenue Act, 1964 and for change in land use wherever required. Local authority would issue all such approvals including change in land use, layout plan and building plan in accordance with the prevailing rules / regulations.

(v) Since the project of the private Developer would have an in-principle approval of the State Government approval of layout plan/maps may be issued by the concerned local authority within a period of 30 days. It shall be under Sakala.

(vi) The Project Screening Committee on the basis of land use change, layout plan approval and detailed project report (both administrative and technical) submitted by the Developer and the proposed work plan and cash flow, approve the scheme submitted by the private Developer within 30 days.

(vii) After the above approvals, Developer shall submit building plans for approval to concerned authority/ULB.

(viii) After in-principle approval of the scheme, KHB / ULB / UDA would invite applications from eligible persons for registration along with following non-refundable registration amount: -

a) Rs. 2000 for EWS

b) Rs. 3500 for LIG

The amount received on account of registration shall be kept by the KHB/ULB/UDA in a separate account opened for the scheme and may be utilized by it towards administrative expenses on the scheme.

(ix) Applications received by KHB/ULB/UDA shall be scrutinized to assess the eligibility of candidates. Allotment of houses shall be made through lottery and the allotment procedure shall be transparent and time-bound. Information to the successful applicants shall be given through news papers / by post.

(x) Provision for women beneficiaries, physically handicapped and SC/ST categories shall be made as per existing rules and regulations.

(xi) KHB / ULB / UDA shall co-ordinate sanction of loan to the successful applicants from financial institutions like Banks, NHB, HUDCO etc.

(xii) The amount of loan obtained by the successful applicants may be directly deposited by the Banks in a separate ESCROW account opened for the scheme for carrying out development work in the scheme. In this regard, the KHB/ULB/UDA shall assist the allottees in obtaining loan by preparing the draft of the agreement to be entered into between the concerned Bank, Developer and the allottee.

(xiii) The loan amount transferred to the Escrow account will be released in 4 to 5 installments to the Developer based on the certificate issued by 3rd party agency, after the verification of the progress of work under the approved work plan and cash flow. First installment will be released after three months of the start of construction work. If the Developer fails to carry out development work in accordance with the work plan / action plan, he will have to furnish reasons for the same and get the modified work plan / action plan approved from KHBI/ULB/UDA.

(xiv) The project period could be extended by 6 months without penalty and beyond 6 months, extension would be considered on levy of penalty as prescribed. No extra incentive would be considered in case of extension of project.

(xv) If the Developer leaves the work incomplete, KHB/ULB/UDA may get the work completed at the risk and cost of the Developer. It shall be compulsory for the Developer to submit at the time of submission of the scheme an agreement to this effect on a stamp paper.

(xvi) Developer may raise loan from banks for construction of EWS/LIG flats or may finance the same out of his own resources.

(xvii) Keeping in view the interest of the economically weaker sections, the concerned nodal agency shall ensure that external development works for the scheme are carried out within 12 to 18 months.

(xviii) The Developer shall construct the houses according to the approved type design. Indicative type designs are given at **Annexure-A and Annexure-B.** Building specifications shall be in accordance with the norms fixed under the applicable building regulations.

(xix) It shall be compulsory for the private Developer to establish quality control laboratory at the site of the project so that the quality of the work may be maintained. Indicative list of General specifications and amenities to be provided by the

Developer is at **Annexure-C.** State Level Quality monitors and nationally empanelled Third Partly Inspection and Monitoring / Agencies (TPIMA) may be engaged by KHB/ULB/UDA.

(xx) After completion of the scheme, the Developer shall submit to the KHB/ULB/UDA two sets of 'As built Drawings' of the whole scheme and shall simultaneously make declaration regarding completion of the scheme and inform the KHB/ ULB/UDA about the same.

(xxi) The Developer shall maintain the entire housing complex developed under the provisions of this policy for 3 years after the completion of the project. Thereafter, it may be transferred to RWA. One time maintenance amount as decided by the nodal agency in consultation with Developer, will have to be deposited as a corpus amount in a separate maintenance fund after completion of the project, so that maintenance work is taken care of. Contribution by allottees of the houses can also be added to the corpus.

**3.4 Project Screening Committees for various towns**

**(a) For BBMP limits**

| | |
|---|---|
| Commissioner, BBMP | Chairman |
| Deputy Commissioner, Bangalore (Urban) | Member |
| Additional Director (Town Planning), BBMP | Member |
| Assistant Commissioner of the Revenue Sub-Division | Member |
| Tahsildar of the Taluk | Member |
| Zonal Joint Commissioner, BBMP | Member-Secretary |

**(b) For Areas covered by Municipal Corporations / Municipalities**

| | |
|---|---|
| Deputy Commissioner | Chairman |
| Commissioner, UDA | Member |
| Tahsildar of Taluk | Member |
| Town Planning Member of UDA | Member |
| Project Director, DUDC | Member |
| Commissioner of the Corporation/Municipality | Member-Secretary |

**3.5 Project Screening Committee for Areas covered by Urban Development Authorities**

**(a) For BDA limits**

| | |
|---|---|
| Commissioner, BDA | Chairman |
| Commissioner, BBMP | Member |
| Director, Town Planning | Member |
| Deputy Commissioner (Bangalore Urban) | Member |
| Assistant Commissioners of Revenue Sub-Divisions | Member |
| Revenue Sub-Divisions | Member |
| Tahsildar of the Taluk | Member |
| Secretary, BDA | Member-Secretary |

**(b) For other Urban Development Authorities**

| | |
|---|---|
| Deputy Commissioner | Chairman |
| Commissioner,<br>Corporation/Municipality | Member |
| Project Director, DUDC | Member |
| Tahsildar of Taluk | Member |
| Town Planning Member of UDA | Member |
| Commissioner, UDA | Member-Secretary |

3.6 A State Level Monitoring Committee consisting of the following would be constituted to approve the projects in-principle and to ensure timely completion of the sanctioned projects :-

| | |
|---|---|
| Chief Secretary to Government | Chairman |
| Principal Secretary, Finance | Member |
| Principal Secretary, Urban Development | Member |
| Principal Secretary, Housing | Member |
| Principal Secretary, Revenue | Member |
| Secretary (Municipalities & UDA) | Member |
| Director, Town Planning | Member |
| Director, Municipal Administration | Member |
| Commissioner, Karnataka Housing Board | Member-Secretary |

## CHAPTER -4

## INCENTIVES TO AFFORDABLE HOUSING PROJECTS

The following financial as well as non-financial incentives, both on supply side and demand side, will be provided to eligible affordable housing projects by the State / Central Government.

**(1) Supply side financial incentives:**

i. Waiver of conversion charges.
ii. Waiver of external development charges.
iii. Waiver of Building Plan approval fee.
iv. Commercial area to be allowed - 5% in EWS / LIG area (10% of the total area)
v. Buyback guarantee for EWS/LIG Dwelling units
vi. Plan sanction fee waiver by ULBs/UDAs

**(2) Supply side non-financial incentives:**

(i) Following timelines by line departments shall be followed for grant of NOC/consent/issue of documents for Affordable Housing projects. These services will be made part of Sakala Scheme introduced by Government of Karnataka.

a) Conversion of land from agriculture to non-agriculture - 45 days
b) Change of ownership in RTC - 45 days
c) Conversion order entry in RTC - 15 days
d) Issue of Single Katha & Katha number from Panchayat - 45 days
e) NOC from Minor Irrigation Department - 45 days
f) NOC from BSNL - 30 days
g) NOC from Airports Authority of India - 30 days
h) NOC from BESCOM / KPTCL - 60 days
i) Consent for Establishment by PCB - 60 - 90 days
j) NOC from Fire Services Department - 60 days
k) NOC from Central Ground Water Board - 60 - 90 days
l) Sanction of building plan - 60 days
m) License to construct by Panchayat - 30 days
n) Katha bifurcation - 60 days
o) Consent for operation by PCB - 45 days
p) NOC from Fire Services Dept to obtain OC - 45 days
q) NOC from CEIG to obtain OC - 30 days
r) Occupancy Certificate from ULBs - 60 days

(ii) Inventory of State / city land holdings and increasing land supply for affordable housing

(iii) Utilization of additional FAR in the project area. In case the FAR cannot be utilized fully in project area, it can be converted into TDRs.

**(3) Demand side financial incentives:**

i. Reduction of stamp duty for registration of property in affordable housing projects

- EWS flat - Rs.I0.00 per flat
- LIG flat - Rs.25.00 per flat

ii. Capital Grant to EWS and LIG dwelling units as may be extended by the Central and State Governments.

iii. Interest subsidy as may be extended by GOI

iv. Moratorium for 3 year in payment of EMI as may be extended by GOI

v. Priority sector lending for affordable housing projects as may be extended by RBI

**(4) Demand side non-financial incentives:**

The State government and nodal agencies to initiate programs to accelerate the home ownership process in low income groups through the following generic type of interventions;

i. As a facilitator to enable the EWS/ LIG families to access institutional credit including subsidies under existing schemes.

ii. Outreach to low income families on the importance of home ownership for financial security.

iii. Educational programs for financial literacy with respect to home loans.

iv. Active handholding in the process of securing home loans and purchasing houses.

v. Awareness programs in completed projects regarding building maintenance and community management.

vi. Interventions in skill development, livelihood, health and education in completed projects to ensure the upward mobility of these low income home owners.

vii. Support new 'Know your client' procedures being adopted by Housing finance providers.

**(5) i. Land Use - Planning Authorities will consider and approve the following land use pattern for affordable housing projects**

| | | | |
|---|---|---|---|
| (a) | Ground coverage | - | 50% |
| (b) | Roads | - | 20% |
| (c) | Parks | - | 10% |
| (d) | Civic amenities | - | 10% |
| (e) | Commercial | - | 10% |

ii. Side / Rear setbacks on EWS/LIG plot area can be relaxed up to minimum 3 meters by the local authority to achieve 50% ground coverage.

iii. Parking norms can also be relaxed suitably to achieve 50% ground coverage.

**(6) Use of Transferable Development Rights (TDR) as a result of additional FAR:-**

Efforts should be made by Developer to consume maximum FAR (including additional FAR) on the same project land. If he is unable to do so, balance/unutilized FAR will be allowed to him in the form of TDR under separate guidelines approved by the State Government in this regard. Use of TDR will be allowed after successful completion of the project. Allowable TDR should normally be in the same sector/area/zone of master plan having more or less equivalent value of land. However, in case this is not feasible, TDR will be allowed to be transferred to other areas as per norms to be prescribed in this regard. TDR certificate issued may be utilized or transferred by the Developer.

**(7) Leasing and development of Civic Amenities area:**

Affordable housing projects fulfilling the norms prescribed by the State Government and approved by Local Planning Authorities can provide for civic amenities such as primary school, primary health care centre etc., automatically and the Planning Authority will accordingly approve such development plan submitted by affordable housing Developer. If in case the need for such civic amenities does not arise owing to the fact such facilities are available in the immediate vicinity, then the affordable housing Developer can approach Local Planning Authority for utilizing the earmarked civic amenities area for other permissible uses.

## CHAPTER - 5

### QUALIFYING CRITERIA FOR DETERMINING AFFORDABLE HOUSING PROJECTS

i. Any affordable housing project should have dwelling units for EWS/LIG category as prescribed in chapter 2.

ii. Super built up area / carpet area of the dwelling units in Affordable housing projects should be as per sizes specified by the State / Central Governments from time to time.

iii. Cost of dwelling unit for EWS/LIG category should not have excessive profit margin added to it. The onus of proving bare minimum cost of construction lies with the affordable housing Developer through workings of the cost.

iv. Cost ceiling of dwelling unit for EWS/LIG should be within the price levels indicated by the State / Central Government for such dwelling units.

v. Beneficiaries for EWS and LIG category should be so selected that their monthly household income falls within the prescribed income levels.

Affordable housing projects fulfilling the above mentioned criteria will be able to avail of the State / Central government subsidies, wherever available.

## CHAPTER - 6

## ROLE OF STATE GOVERNMENT

i. Prepare Action Plan and programs to meet the housing shortage and augment supply of land for housing particularly for EWS / LIG.

ii. Ensure that the land is made available for undertaking EWS/LIG housing in all urban areas of Karnataka to KHB / ULBs / UDAs

iii. Motivate private sector to participate in affordable housing for EWS / LIG.

iv. Set up occupational training centers for skill up-gradation.

v. Organize meetings of bankers at the State and District Level to ensure availability of funds.

vi. Take steps to promote PPPs and ensure that projects awarded to private Developers are cleared without delay.

vii. To bring down the cost of EWS / LIG housing by waiving the stamp duty, conversion charges, development levies, registration charges etc.

viii. Ensure that various approvals are accorded for the project within the stipulated time as per Sakala and establish mechanism for fast-track approval.

ix. Make provision for phased manner completion of the project and also accord phase-wise occupancy certificate i.e., floor-wise to the Developer to enable early disposal of completed project.

x. The Karnataka Housing Board (KHB) shall act as State Level Nodal Agency (SLNA) for implementation of this Policy.

**Annexure A**




TYPICAL FLOOR PLAN

AREA FOR FLATS ( PER UNIT)

BUILT-UP AREA

BALCONY

CORRIDOR & STAIRCASE

AREA PER FLAT

TOTAL SUPER BUILT-UP AREA

INDICATIVE TYPE DESIGN OF E.W.S. FLATS (G+3)

**Annexure B**




## TYPICAL FLOOR PLAN

### AREA FOR FLATS ( PER UNIT)

| | |
|---|---|
| BUILT-UP AREA | = 40.10 SQ. M. |
| BALCONY (50%) | = 1.80 SQ. M. |
| CORRIDOR & STAIRCASE AREA PER FLAT | = 3.80 SQ. M. |
| TOTAL SUPER BUILT-UP AREA | = 45.70 SQ. M. |

## INDICATIVE TYPE DESIGN OF L.I.G.-A FLATS (G+3)

## Annexure-C

### Indicative List of General Specifications and Amenities

**Construction Specifications**

- Aesthetically designed master plan with tree-lined avenues
- Ground+ 3 buildings with beautifully landscaped courtyards
- Eco-friendly green development

**Facilities as per Town Planning Norms**

- Hospital/school (need based)
- Bus stop (need based)
- Parks/open spaces
- Gated development

**Specifications Structure**

- RCC structure with brick partition walls

**Bedroom**

- 1 'x l' ceramic/porcelain tile flooring
- solid core flush door
- Rooms with overhead storage space

**Kitchen**

- Ceramic tile flooring
- Kota stone platform with kota stone sink (or any other equivalent local material)
- 2' high ceramic tile dado above kitchen platform
- Overhead storage space

**Bathroom/WC**

- Separate bathroom and WC
- Anti- skid ceramic tile flooring
- Ceramic tile dado up to door height/skirting height
- Concealed plumbing
- Premium quality fittings
- Indian style/Orissa pan WC

**Electrical Fittings**

- Sufficient points in all rooms
- Branded electrical switches
- Cable TV & telephone points in the living room
- Batten copper wiring

**General**

Colour wash/white wash in all rooms, kitchen, WC/Bath, exterior surface and common areas. Kota stone or any other equivalent local material flooring in common areas. All door/window frames in steel sections. Water storage tanks on terrace with minimum capacity of 500 liters per flat.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ॥ ಇ.ವಿ.ರಮಣ ರೆಡ್ಡಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ವಸತಿ ಇಲಾಖೆ.

**PR-1249**

**SC-50**

## ಶಿಕ್ಷಣ ಸಚಿವಾಲಯ

**ವಿಷಯ:** ಅರೇಬಿಕ್ ಶಾಲೆಗಳನ್ನು ಅನುದಾನಕ್ಕೊಳಪಡಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸುವ ಸಲುವಾಗಿ ತ್ರಿಸದಸ್ಯ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಇಡಿ 59 ಪಿಎಂಸಿ 2006, ದಿನಾಂಕ 06–10–2007.
2) ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪ ಸಂಖ್ಯಾತ ಭಾಷಾ ಶಾಲೆಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ :ಎಂಸಿ(10) ಹಿಂದಿ2(ಅರೇಬಿಕ್) ಸ:ಅ. 36/2007–08, ದಿನಾಂಕ 25–10–2010 ಮತ್ತು 30–07–2012.
3) ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪ ಸಂಖ್ಯಾತ ಭಾಷಾ ಶಾಲೆಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಸಿ(10) ಹಿಂದಿ2(ಅರೇಬಿಕ್) ಸ:ಅ. 36/2007–08, ದಿನಾಂಕ 26–11–2012.
4) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ 07–05–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಸಾಮಾನ್ಯ ಪಾಠಶಾಲೆಗಳನ್ನು ಅನುದಾನಕ್ಕೊಳಪಡಿಸುವ ಸಲುವಾಗಿ ಸಹಾಯಾನುದಾನ ಕೋರುವ ಖಾಸಗಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ಸಹಾಯಾನುದಾನ ಪಡೆಯಲು ಅರ್ಹತೆ ಹೊಂದಿದೆಯೇ? ಅಥವಾ ಇಲ್ಲವೇ? ಹಾಗೂ ಅದರಲ್ಲಿನ ನೇಮಕಾತಿಗಳನ್ನು ನಿಗದಿತ ಕಾರ್ಯ ವಿಧಾನದ ಪ್ರಕಾರ/ನಿಯಮಗಳನ್ವಯ ಮಾಡಲಾಗಿದೆಯೇ? ಅಥವಾ ಇಲ್ಲವೇ? ಎಂಬ ಬಗ್ಗೆ ಪರಿಶೀಲಿಸಲು ಪ್ರಸ್ತಾವನೆಗಳನ್ನು ಜಿಲ್ಲಾ ಪರಿಶೀಲನಾ ಸಮಿತಿಯ ಸ್ಪಷ್ಟ ಅಭಿಪ್ರಾಯ/ಶಿಫಾರಸ್ಸು ಪಡೆಯುವಂತೆ ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪ ಸಂಖ್ಯಾತ ಭಾಷಾ ಶಾಲೆಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸಾಮಾನ್ಯ ಶಾಲೆಗಳಿಗೆ ಇರುವಂತೆಯೇ ಸಹಾಯಾನುದಾನ ಕೋರುವ ಪ್ರಸ್ತಾವನೆಗಳನ್ನು ಪರಿಶೀಲಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ತ್ರಿಸದಸ್ಯ ಸಮಿತಿಯನ್ನು ರಚನೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | |
|---|---|---|
| 1. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | ಅಧ್ಯಕ್ಷರು |
| 2. | ಜಿಲ್ಲಾ ಉಪ ನಿರ್ದೇಶಕರು (ಆಡಳಿತ) ಅಥವಾ ಇವರಿಂದ ನಿಯೋಜಿತ ಪ್ರತಿನಿಧಿ | ಸದಸ್ಯರು |
| 3. | ಆಯಾಯ ಕ್ಷೇತ್ರ ಶಿಕ್ಷಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ನಿರ್ದೇಶಕರು, ಅರೇಬಿಕ್ ಶಾಲೆಗಳಿಗೆ ಅನುದಾನಕ್ಕೆ ಒಳಪಡಿಸುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಪ್ರಸ್ತಾಪಿಸಲಾಗಿದ್ದ ತ್ರಿಸದಸ್ಯ ಸಮಿತಿಯಲ್ಲಿ ಇಬ್ಬರು ಶಿಕ್ಷಣಾಧಿಕಾರಿಗಳು ಪ್ರತಿನಿಧಿಗಳಾಗಿದ್ದು, ಅವರುಗಳಲ್ಲಿ ಒಬ್ಬರು ಉರ್ದು/ಅರೇಬಿಕ್ ಭಾಷಾ ಪರಿಜ್ಞಾನ ಇರುವ ಅಧ್ಯಾಪಕರನ್ನು ಸೇರಿಸಿ ತ್ರಿಸದಸ್ಯ ಸಮಿತಿಯನ್ನು ರಚಿಸುವ ಕುರಿತಂತೆ ಜಿಲ್ಲಾ ಮಟ್ಟದಲ್ಲಿ ಉಪ ನಿರ್ದೇಶಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಉರ್ದು ಶಿಕ್ಷಣ ಸಂಯೋಜಕರನ್ನು ತ್ರಿಸದಸ್ಯ ಸಮಿತಿಗೆ ಸೇರ್ಪಡಿಸಬಹುದೆಂದು ಅಭಿಪ್ರಾಯಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ನೇತೃತ್ವದ ತ್ರಿಸದಸ್ಯ ಸಮಿತಿಯಲ್ಲಿ ಆಯಾ ಕ್ಷೇತ್ರ ಶಿಕ್ಷಣಾಧಿಕಾರಿಗಳ ಬದಲಿಗೆ ಉಪ ನಿರ್ದೇಶಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಉರ್ದು ಶಿಕ್ಷಣ ಸಂಯೋಜಕರನ್ನು ನಿಯುಕ್ತಿಗೊಳಿಸುವ ಅಗತ್ಯವಿಲ್ಲ. ಶೈಕ್ಷಣಿಕವಾಗಿ ಅರೇಬಿಕ್ ಶಿಕ್ಷಣದ ಬಗ್ಗೆ ಏನಾದರೂ ಮಾಹಿತಿ/ಸ್ಪಷ್ಟೀಕರಣದ ಅಗತ್ಯ ಬಿದ್ದರೆ ಉರ್ದು ಶಿಕ್ಷಣ ಸಂಯೋಜಕರ ನೆರವನ್ನು ಪಡೆಯಬಹುದು ಎಂದು ಅಭಿಪ್ರಾಯಿಸಿ, **ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾ ಉಪ ನಿರ್ದೇಶಕರು (ಆಡಳಿತ) ಹಾಗೂ ಆಯಾಯಾ ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು** ಒಳಗೊಂಡು ರಚಿಸಲು ಉದ್ದೇಶಿಸಿರುವ **ತ್ರಿಸದಸ್ಯ ಸಮಿತಿಯನ್ನು** ಅನುಮೋದಿಸಬಹುದೆಂದು ಅಭಿಪ್ರಾಯಿಸಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ : ಇಡಿ 11 ಎಸ್‌ಎಂಸಿ 2010, ಬೆಂಗಳೂರು, ದಿನಾಂಕ : 02ನೇ ಜನವರಿ 2014

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಅರೇಬಿಕ್ ಶಾಲೆಗಳನ್ನು ಅನುದಾನಕ್ಕೊಳಪಡಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸಲು ಸಾಮಾನ್ಯ ಶಾಲೆಗಳಿಗೆ ತ್ರಿಸದಸ್ಯರ ಸಮಿತಿ ರಚಿಸಿರುವಂತೆಯೇ ಅರೇಬಿಕ್ ಶಾಲೆಗಳಿಗೂ ಸಹ ಈ ಕೆಳಕಂಡಂತೆ ತ್ರಿಸದಸ್ಯರ ಸಮಿತಿ ರಚಿಸಿ ಆದೇಶಿಸಿದೆ. ಸದರಿ ಸಮಿತಿಯು ಸಾಮಾನ್ಯ ಶಾಲೆಗಳನ್ನು ಅನುದಾನಕ್ಕೆ ಒಳಪಡಿಸಲು ಕೈಗೊಳ್ಳುವ ಪ್ರಕ್ರಿಯೆಗಳನ್ನು ಅರೇಬಿಕ್ ಶಾಲೆಗಳಿಗೂ ಸಹ ಅನುಸರಿಸತಕ್ಕದ್ದು.

| | | |
|---|---|---|
| 1. | ಸಂಬಂಧಿಸಿದ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | ಅಧ್ಯಕ್ಷರು |
| 2. | ಸಂಬಂಧಿಸಿದ ಜಿಲ್ಲಾ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 3. | ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಆರ್. ಅನ್ನಪೂರ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸಮಿತಿಗಳು)

PR. 65
SC. 100

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** 2013–14ನೇ ಸಾಲಿನಲ್ಲಿ, "ಇಂಜಿನಿಯರಿಂಗ್ ಮತ್ತು ವೈದ್ಯಕೀಯ" ವಿದ್ಯಾರ್ಥಿಗಳಿಗಾಗಿ 100 ಸಂಖ್ಯಾಬಲದ 60 ಹೊಸ ಮೆಟ್ರಿಕ್–ನಂತರದ ಪುರುಷ ಮತ್ತು ಮಹಿಳೆಯರ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಪ್ರಸ್ತಾವನೆ ಸಂಖ್ಯೆ : ಹಿಂವಕಇ/ ವನಿಶಾ–2/ಸಿಆರ್–54/2013–14, ದಿನಾಂಕ 24–07–2013.

**ಪ್ರಸ್ತಾವನೆ:**

ರಾಜ್ಯದ ಅನೇಕ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ, ಹಿಂದುಳಿದ ವರ್ಗಗಳ ಬಡ ಕುಟುಂಬಗಳಿಗೆ ಸೇರಿದ ಬಹಳಷ್ಟು ಪುರುಷ/ಮಹಿಳೆಯರು ವ್ಯಾಸಂಗ ಮಾಡುತ್ತಿದ್ದು, ಇವರುಗಳಲ್ಲಿ ಕೆಲವರಿಗೆ ಮಾತ್ರ ಹಾಲಿ ಇರುವ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಲ್ಲಿ ಪ್ರವೇಶವನ್ನು, **ಇತರೆ ಕೋರ್ಸುಗಳ ವಿದ್ಯಾರ್ಥಿಗಳ ಜೊತೆಗೆ ಕಲ್ಪಿಸಲಾಗಿದೆ.** ಇದರಿಂದ ಅವರು ಅಧ್ಯಯನ ಮಾಡಲು ಉತ್ತಮ ಪರಿಸರ ದೊರೆಯುತ್ತಿಲ್ಲ. ಹಾಗೂ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ, ಇಂಜಿನಿಯರಿಂಗ್ ಮತ್ತು ಮೆಡಿಕಲ್ ವಿದ್ಯಾರ್ಥಿಗಳ ಅತ್ಯಂತ ಹೆಚ್ಚಿನ ಬೇಡಿಕೆಯಿದ್ದು, ಈ ಕಾರಣಕ್ಕಾಗಿ, ಈ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪುರುಷ ಮತ್ತು ಮಹಿಳಾ ವಿದ್ಯಾರ್ಥಿಗಳಿಗೆ, **ಪ್ರತ್ಯೇಕವಾಗಿ** ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ, ಇವರುಗಳಿಗೆ ವಿಶೇಷವಾದ ಸೌಲಭ್ಯಗಳನ್ನು (ಗ್ರಂಥಾಲಯ, ಕಂಪ್ಯೂಟರ್, ಡ್ರಾಯಿಂಗ್ ಟೇಬಲ್, ಇತ್ಯಾದಿ) ಒದಗಿಸುವ ಅಗತ್ಯವಿರುತ್ತದೆ. ಹಾಗೂ ಈ ರೀತಿ ಪ್ರತ್ಯೇಕವಾಗಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ಇವರುಗಳಿಗೆ ವಿಶೇಷ ಸೌಲಭ್ಯಗಳನ್ನು ಕಲ್ಪಿಸಬೇಕೆಂದು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿಯು ಸಹ ಶಿಫಾರಸ್ಸು ಮಾಡಿರುತ್ತದೆ.

ಈ ಹಿನ್ನೆಲೆಯಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು 100 ಸಂಖ್ಯಾಬಲದ 60 ಹೊಸ ಪುರುಷ ಮತ್ತು ಮಹಿಳಾ ವಿದ್ಯಾರ್ಥಿನಿಲಯಗಳನ್ನು ಪೂರಕ ಸಿಬ್ಬಂದಿಗಳೊಂದಿಗೆ ಮಂಜೂರು ಮಾಡಬೇಕೆಂದು ಹಾಗೂ ಈ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡುವ ಸ್ಥಳಗಳನ್ನು ಸೂಚಿಸಿ, ಪ್ರಸ್ತಾಪಿಸಿರುತ್ತಾರೆ.

ಈ ಕಾರಣದಿಂದಾಗಿ ದಿನಾಂಕ 12–07–2013 ರಂದು ಮಂಡಿಸಿದ ಆಯವ್ಯಯ ಭಾಷಣದಲ್ಲಿ ರಾಜ್ಯದಲ್ಲಿ **"ಇಂಜಿನಿಯರಿಂಗ್ ಮತ್ತು ವೈದ್ಯಕೀಯ ವಿದ್ಯಾರ್ಥಿಗಳಿಗಾಗಿ ಪ್ರತಿ ಜಿಲ್ಲೆಯಲ್ಲೂ ಪುರುಷರಿಗೆ ಮತ್ತು ಮಹಿಳೆಯರಿಗೆ 100 ಸಂಖ್ಯಾಬಲದ ತಲಾ ಒಂದು ವಿದ್ಯಾರ್ಥಿನಿಲಯವನ್ನು ಪ್ರತ್ಯೇಕವಾಗಿ ಆರಂಭಿಸಲಾಗುವುದು"** ಎಂದು ಘೋಷಣೆ ಮಾಡಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ 100 ಸಂಖ್ಯಾಬಲದ 60 ಹೊಸ ಮೆಟ್ರಿಕ್ ನಂತರದ ಪುರುಷ ಮತ್ತು ಮಹಿಳೆಯರ ಪ್ರತ್ಯೇಕ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ : ಹಿಂವಕ 487 ಬಿಎಂಎಸ್ 2013, ಬೆಂಗಳೂರು, ದಿನಾಂಕ : 04.12.2013.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಬಡ ಕುಟುಂಬಗಳಿಗೆ ಅನೇಕ ಪುರುಷ/ಮಹಿಳೆಯರಿಗೆ ವಿದ್ಯಾರ್ಥಿನಿಲಯಗಳಲ್ಲಿನ ಪ್ರವೇಶಕ್ಕಾಗಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ಅವರುಗಳಿಗೆ ವಿಶೇಷವಾದ ಸೌಲಭ್ಯಗಳನ್ನು ಒದಗಿಸುವ ಹಿತದೃಷ್ಟಿಯಿಂದ 2013–14ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ **ಅನುಬಂಧ–1** ರಲ್ಲಿ ತಿಳಿಸಿರುವ ಸ್ಥಳಗಳಲ್ಲಿ 100 ಸಂಖ್ಯಾಬಲದ 60 ಹೊಸ "ಇಂಜಿನಿಯರಿಂಗ್ ಮತ್ತು ವೈದ್ಯಕೀಯ" ಪುರುಷ ಮತ್ತು ಮಹಿಳಾ ವಿದ್ಯಾರ್ಥಿನಿಲಯಗಳನ್ನು (30 ಪುರುಷ ಮತ್ತು 30 ಮಹಿಳೆ) ಪ್ರಾರಂಭಿಸಲು ಮಂಜೂರಾತಿ ನೀಡಿದೆ. ಮತ್ತು ಪ್ರತಿ ವಿದ್ಯಾರ್ಥಿನಿಲಯಕ್ಕೆ ಅಗತ್ಯವಿರುವ ವಿವಿಧ ಹುದ್ದೆಗಳನ್ನು **ಅನುಬಂಧ–2** ರಲ್ಲಿರುವಂತೆ ಮಂಜೂರು ಮಾಡಲಾಗಿದೆ. ಮುಂದುವರೆದು ಕೊಪ್ಪಳ ಜಿಲ್ಲೆಯಲ್ಲಿ ಇಂಜಿನಿಯರಿಂಗ್ ಅಥವಾ ವೈದ್ಯಕೀಯ ಕಾಲೇಜು ಇಲ್ಲದಿರುವ ಕಾರಣದಿಂದ ಹಾಗೂ ಬೆಂಗಳೂರು ಜಿಲ್ಲೆಯಲ್ಲಿ ಅತೀ ಹೆಚ್ಚಿನ ಬೇಡಿಕೆ ಇರುವುದರಿಂದ, ಬೆಂಗಳೂರು ನಗರ ಜಿಲ್ಲೆಗೆ ಹೆಚ್ಚುವರಿಯಾಗಿ ಮಹಿಳೆ ಮತ್ತು ಪುರುಷರಿಗೆ, ತಲಾ ಒಂದರಂತೆ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಅನುಮತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು ಆಯಾ ಆರ್ಥಿಕ ವರ್ಷದಲ್ಲಿ, ರಾಜ್ಯವಲಯ ಯೋಜನೆ ಲೆಕ್ಕಶೀರ್ಷಿಕೆ 2225–03–277–2–53ರ "ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿನಿಲಯಗಳ ಪ್ರಾರಂಭ ಮತ್ತು ನಿರ್ವಹಣೆ" ಇದರಡಿ ಲಭ್ಯವಿರುವ ಅನುದಾನದ ಮಿತಿಯಲ್ಲಿಯೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 657 ವೆಚ್ಚ–3/2013, ದಿನಾಂಕ 10–10–2013 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ,**
ಸರ್ಕಾರದ ಉಪ ಕಾರ್ಯದರ್ಶಿ,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

